ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೩೦

ಪ್ರಧಾನ ಸಂಪಾದಕ:
ಡಾ॥ ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.

'ಪಂಪ ಭಾರತಂ'

ಎಂಬ

# ವಿಕ್ರಮಾರ್ಜುನ ವಿಜಯಂ

(ಆಶ್ವಾಸ ೯–೧೪)




ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೬೦

# ನವಮಾಶ್ವಾಸಂ

ಕಂ॥ ಶ್ರೀಗೆ ನೆಗೞ್ತೆಗೆ ವೀರ।
ಶ್ರೀಗಾಗರಮಪ್ಪೆನೆಂಬ ಕಳ ಕಳ ವಿಜಯೋ॥
ದ್ಯೋಗದೊಳೆ ನೆಗೞ್ವೆನೆಂಬು।
ದ್ಯೋಗಿಗೆ ಮಲೆವನ್ಯನೃಪತಿ ಮಂಡಳಮೊಳವೇ ॥೧॥

ಎಂದು ಜಗಜ್ಜನಮುಳವನ।
ಗುಂದಲೆಯಾಗಡರೆ ಬಿಡದೆ ಪೊಗೞುತ್ತಿರೆ ಕುಂ॥
ದೇಂದು ಯಶಂ ರಥದಿಂದಿೞಿ।
ತಂದೆಱಗಿದನಗ್ರಜನ್ಮ ಪದ ಸರಸಿಜದೊಳ್ ॥೨॥

ಅಱಿಮಗನ ಪವನ ತನಯನ।
ನೆಱೆದಾಶೀರ್ವಚನ ಶತಮನಾಂತನುನಯದಿಂ॥
ದೆಱಗಿದಮಳರುಮನಣ್ಮಿಱಿ।
ನೊಱಲ್ದು ತೆಗೆದಪ್ಪಿ ಪರ[1] [ಸೆ] ನಲ್ವರಕೆಗಳಿಂ ॥೩॥

ಚಲ ಚಲದಿನುೞಿದೆ ಪಗೆವರ।
ತಲೆಗಳನರಿದಂದು ಬಂದು ಪಾಂಡುತನೂಜರ್॥
ತಲೆದೋಱಿರೆ ರಾಗಮುಗುಂ।
ದಲೆಯುಂ ಪೊಂಪುೞಿಯುಮಾಯ್ತು ಮತ್ಸ್ಯಂಗಾಗಳ್॥೪॥

ಮ॥ ಗುಡಿಯಂ ಕಟ್ಟಿಸಿ ಪೊಯ್ಸಿ ಬದ್ದವಣಮಂ ಪ್ರಾಣಕ್ಕಮರ್ಥಕ್ಕಮಿ।
ನ್ನೆಡ[2]ಱೇನೇತಱೊಳಪ್ಪುದೆಂದು ಕುರುಡಂ ಕಣ್ಬೆತ್ತವೋಲ್
ರಾಗದಿಂ॥

1 ಸಿದಂ ಪ (ಕ.), ಸಿ ನಲ್ವ (ಖ. ಗ. ಘ.). 2 ಱೊಳ್ತಪ್ಪದ (ಕ. ಗ.).

ಡೊಡೆಯ[1] [ಂ ತಾಂ] ಬಗೆದುಳ್ಳ ಸಾರ ಧನಮಂ ಮುಂದಿಟ್ಟತಿ ಪ್ರೀತಿಯ
ಪಡೆದಂ ಮತ್ಸ್ಯಮಹೇಶನಂದು ಮನದೊಳ್ ತತ್ಪಾಂಡು ಪುತ್ರರ್ಕ[2]ಳಾ ||

ಉ || ಕೇಳಿರೆ ಕಂಕಭಟ್ಟನೆ ಯುಧಿಷ್ಠಿರನಾ ವಲಲಂ ವೃಕೋದರಂ
ಬಾಳೆಯುರಂದಲಾಡಿಪ ಬೃಹಂದಳೆ ಫಲ್ಗುಣನಂಕದಶ್ವ ಗೋ ||
ಪಾಳಕರೆಂಬರಾ ನಕುಳನುಂ ಸಹದೇವನುಮಾ[3]ದರೆಂ ಮಹೀ
ಪಾಳರೊಳಾದ ಕಾರ್ಯಗತಿಗಳ್ ಬಗೆಯಲ್ಕೆ[4] ಬಹು ಪ್ರಕಾರಮೊ || ೬

ವ || ಎಂಬ ಪುರಜನಾಳಾಪಂಗಳ್ ನೆಗೞೆ ವಿರಾಟನ ಮಹಾದೇ ಸುದೇಷ್ಣೆ ಕೃಷ್ಣೆಗಾಗಳೆಱಗಿ ಪೊಡೆವಡೆ ಧರ್ಮತನೂಜಂಗೆ ವಿರಾಟನವ ತಮಣಿಮಕುಟನಿಂತೆಂದು ಬಿನ್ನಪಂಗೆಯ್ದಂ—

ಚಂ || ಇರದುೞಿದಾವ ಮಂಡಲದೊಳಂ ನೃಪನೀಂ ದಯೆಯಿಂದಮಿಲ್ಲಿ ಬಂ
ದಿರೆ ದೊರೆವೆತ್ತುದೆನ್ನ ಮೆಱೆವಾಳ್ವೆಸನೆನ್ನ ತನೂಜೆಗಂಕದು ||
ತ್ತರೆಗೆ ವಿವಾಹ ಮಂಗಳಮನಿನ್ನಭಿಮನ್ಯುಗೆ ಮಾಳ್ಪುದುತ್ತರೊ
ತ್ತರಮೆನೆ ಮಾಡು ನಿನ್ನ ದಯೆಯಿಂ ಮೆಱೆವೆಂ ಯಮರಾಜ ನಂದನಾ || ೭

ವ || ಎಂಬುದುಮಂತೆಗೆಯ್ವೆಂ ನಿಮ್ಮಮ್ಮ ನಣ್ಪುಗಳೀಗಳಾದುವ ಹಿರಣ್ಯ ಗರ್ಭ ಬ್ರಹ್ಮರಿಂ ತಗುಳ್ದವ್ಯವಚ್ಛಿನ್ನಮಾಗಿ ಬಂದುವು ನಿನ ದೊರೆಯನಂಟನುಮನೆಲ್ಲಿ ಪಡೆವೆನೆಂದು ವಿರಾಟನಂ ಸಂತಸಂಬ ನುಡಿದು ಚಾಣೂರಾರಿಯಂ ಸುಭದ್ರೆಯುಮನಭಿಮನ್ಯುವುಮನೊ ಗೊಂಡು ಬರ್ಪುದೆಂದು ಬೞಿಯನಟ್ಟಿ ಬರವಱಿದು ಪಾಂಡವರಯ್ವರು ವಿರಾಟ ಸಮೇತಮಿದಿರ್ವೋಗಿ ಕಂಡಾಗಳ್—

1 ಲ್ಕಂ (ಸ.). 2 ಳಂ (ಖ. ಗ. ಫ.). 3 ದೊಡಂ (ಕ.), ದಡಂ(ಖ.)
4 ಪರೋಪ (ಕ. ಖ.).

ಕಂ॥ ಮುರರಿಪು ಧರ್ಮನಂದನ ಪದಾಬ್ಜಯುಗಕ್ಕೆ ಮರುತ್ಸುತಾದಿಗಳ್।
ಹರಿ ಚರಣಾಂಬುಜಕ್ಕೆಱಗೆಯುತ್ಸವದಿಂದಭಿಮನ್ಯು ತಮ್ಮುತ್ತೈ ॥
ವರ ಲಲಿತಾಂಘ್ರಿ ಪದ್ಮನಿವಹಕ್ಕೆಱಗುತ್ತಿರೆ ತನ್ಮುಖಾಬ್ಜದೊಳ್ ।
ಪರಕೆಗಳುಣ್ಮಿ ಪೊಣ್ಮಿದುವು ಪಂಕಜದಿಂ ಮಕರಂದದಂತೆವೋಲ್ ॥ ೮ ॥

ವ॥ ಅಂತು ಮಂದರ ಧರನುಂ ತಾಮು[1]ಮೊಂದೊರ್ವರನಗಲ್ದಿಂ
ಱಯಮಾದ ಸುಖ ದುಃಖಂಗಳನನ್ಯೋನ್ಯ ನಿವೇದನಂ ಗೆಯ್ದಾನಂದ
ಂ ಪೊಱಲಂಪೊಕ್ಕು ಮಜ್ಜನ ಭೋಜನಾದಿಗಳಿಂದಮುಪಗತ ಪರಿಶ್ರಮ
ಂ ಮಾಡಿ ಮುರಾಂತಕನನಂತಕ ನಂದನನಭಿಮನ್ಯು ವಿವಾಹಕಾರ್ಯ
ಯಾರ್ಲೋಚನೆಯೊಳೊಡಂಬಡಿಸಿ ಶುಭ ಲಗ್ನೋದಯದೊಳ್—

ು ॥ ವಾರಿಧಿ ಘೋಷದಂತೆಸೆವ ಮಂಗಳ ತೂರ್ಯರವಂಗಳಿಂ ಬಿಯಂ।
ಮೇರು[2]ವ ಪೊನ್ನಣಂ ನೆಱೆಯದೆಂಬಿನಮಿಟ್ಟಳವಾಗೆ ವಾರನಾ॥
ರೀ ರಮಣೀಯ ನೃತ್ತಮುಮರುತ್ತಿರೆ ಸಂದ ವಿರಾಟನಂದು ಕೆ।
ಯ್ನೀರೆಱೆದೀಯೆ ಗೆಯ್ದರಭಿಮನ್ಯುಗಮುತ್ತರೆಗಂ ವಿವಾಹಮಂ ॥ ೯ ॥

॥ ಅಂತಾ ವೀರನಂ ವೀರಶ್ರೀಯೊಳ್ ನೆರಪುವಂತುತ್ತರೆಯೊಳ್
ರಪಿ ಕಂಸ ಧ್ವಂಸಿಯಂ ದ್ವಾರಾವತಿಗೆ ಕಳಿಪಿ—

॥ ಮಲೆಪರ್ ಮಂಡಳಿಕರ್ ಕಱುಂಬರದಟರ್ ವೀರರ್ಕಳುಂ
ತಮ್ಮ ಬಾ।
ಬ್ದಲೆಯುಂ ಬೇಡಿದ ವಸ್ತುವಾಹನಮುಮಂ ಮುಂದಿಟ್ಟು
ಮೂವಿಟ್ಟೆಯೊ ॥

---

1 ಮೋಱೊ (ಕ.). 2 ವಡೆನ್ನೊಳಂ (ಕ.), ವೊಜೆನ್ನೊಳಂ (ಖ.), ವತ
ನ್ನೊಳುಂ (ಗ.), ವಂನ್ನೊಳಂ (ಘ.).

ಕ್ಕಲವೋಲಿಂ ಬೆಸಕೆಯ್ಯೆ ಸಂತಮಿರುತುಂ ಕುಂತೀಸುತರ್
ತಮ್ಮ ತೊ
ಳ್ವಲಮಂ ನಚ್ಚರೆ ದಾಯಿಗರ್ ಧರೆಯನಾಳ್ದಂ[1] ದಟ್ಟರೆಂಬೇವ
॥೧

ವ॥ ಅಂತು ತಮ್ಮ ಪೂಣ್ದ ವರ್ಷಾವಧಿ ನೆಱೆದೊಡಮರ
ಗಳ್ಗಂತ್ಯಕಾಲಂ ನೆಱೆಯದುದರ್ಕುಮ್ಮಳಿಸಿ ನಮಗೆ ಕೆಮ್ಮಗಿರಲಾಗ
ದುರ್ಯೋಧನನಪ್ಪೊಡೆ ಶ್ವೇತ ಕೃಷ್ಣಕಾರಕಂ ಕೃಷ್ಣನಂ ತನಗೆ ಮಾ
ನ್ನೆಗಂ ಮುನ್ನಮೆ ಪನ್ನಗಶಯನನಂ ನಮಗೆ ಮಾಡುವುದುತ್ತಮ
ಮೆಂಬೀ ಪ್ರಧಾನ ಕಾರ್ಯಮುಂ ತ[2]ಮ್ಮೊಳಾಳೋಚಿಸಿ ವಿಕ್ರಮಾರ್ಜುನ
ನೀನೆ ಪೋಗಲ್ವೇಟ್ಕುಮೆಂಬುದುಮಪ್ರತಿರಥಂ ರಥಮನೇಱಿ ಮನಃ ಪ
ವೇಗದಿಂ ದ್ವಾರಾವತಿಯನೆಯ್ದಿ ರಾಜಮಂದಿರಮುಂ ಪೊಕ್ಕು ದುಗ್ಧ
ಧವಳ ಶಯ್ಯಾತಳದೊಳ್ ಮಱೆದೊಱಗಿದ ಮಧು ಮಥನನನೆತ್ತಲ
ಕಾಲ ದೆಸೆಯೊಳುಸಿರದೆ ಕುಳ್ಳಿರೆ ದುರ್ಯೋಧನನುಮಾಗಳೆ ಬಂದು
ಬಂಧನನ ತಲೆದೆಸೆಯೊಳ್ ಕುಳ್ಳಿರೆ ಕಿಱಿದಾನುಂ ಬೇಗದಿಂ—

ಕಂ॥ ಪವಡಿಸಿದನಂತನೊಸೆದು।
ಪ್ಪವಡಿಸಿ ತನ್ನೆರಡುಮಡಿಯನೊತ್ತುತ್ತಿರ್ದಾ॥
ಹವ ವಿಜಯಿಯಪ್ಪ ವಿಜಯನ।
ನೆ ವಲಂ ಮುಂ ಕಂಡು ಬಱಿಕೆ ನೃಪನಂ ಕಂಡಂ ॥೧

ವ॥ ಕಂಡು ತನಗೆ ಪೊಡೆವಟ್ಟರ್ವರುಮಂ ಪರಸಿ ನೀವಿರ್ವ
ಬಂದಂದಮುಮಂ ಮನೆವಾಱ್ತೆಯಂ ಪೇೞಿಮೆಂದೊಡೆನ್ಮವ
ಕೆಯ್ಕೊಂಡು ಗೆಲಿಸಲ್ವೇಟ್ಕುಮೆಂದು ಬಂದೆವೆನೆ—

ಕಂ॥ ಮನ್ನಣೆಗೆನಗಿರ್ವರುಮೋ।
ರನ್ನರೆ ವಿಜಯನನೆ ಮುನ್ನೆ ಕಂಡುದಱಿಂದಾ।
ನೆನ್ನಂ ಕೊಟ್ಟೆಂ ನಿನಗಂ।
ಪನ್ನಗಕೇತನ ಚತುರ್ಬಲಂಗಳನಿತ್ತೆಂ ॥೧

1 ನಾ. (ಖ.), ದಾ. (ಗ. ಘ.) 2 ನ್ನೊ. (ಘ.)

ವ॥ ಎಂದು ತನ್ನೊಳ್ ಸಮಾನ ಬಲನಪ್ಪ ತನ್ನ ತಮ್ಮಂ ಕೃತ ರ್ಮನುಮಂ ತನ್ನೊಡನಾಡಿಗಳಪ್ಪ ತೊಂಬತ್ತಾಱು ಸಾಸಿರ ಗೋಪ ಮಾರರೊಡನೆ ಕೂಡಿ ಕಳಿಪಿ ವಿಕ್ರಮಾರ್ಜುನನುಂ ತಾನುಂ ವಿರಾಟ ರಕ್ಕೆ ವಂದು ಮಜ್ಜನ ಭೋಜನಾದಿಗಳೊಳ್ ವಿಗತ ಪರಿಶ್ರಮರಾಗಿ ಱುದೆವಸಮುಱುವ [1][ರುಮಾ]ಱುಂ ಗುಣಂಗಳೆ ಮೂರ್ತಿಮಂತಂಗಳಾ ಂತೆ ಮಂತ್ರಶಾಲೆಯಂ ಪೊಕ್ಕಿರ್ದಾಗಳ್—

ಕಂ॥ ಪ್ರಿಯ ವಿಷಯ ಕಾಂಕ್ಷೆಯಿಂದಿಂ।
ದ್ರಿಯಂಗಳೆಂತೆಯ್ದೆ ಮನಮನಾಶ್ರಯಿಸುಗುಮಂ॥
ತಯ ನಯ ಪರರಯ್ವರುಮಾ।
ಶ್ರಯಿಸಿರ್ದರ್ ವಿಷಯ ಕಾಂಕ್ಷೆಯಿಂ ಮುರರಿಪುವಂ ॥ ೧೩ ॥

ಲೋಕಕ್ಕಿದರ್ಥ ಶಾಸ್ತ್ರದ।
ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ ದಳ॥
ತ್ಕೋಕನದ ಜಠರನಂ ನಿ।
ರ್ವ್ಯಾಕುಳಮಿಂತೆಂದು ಧರ್ಮತನಯಂ ನುಡಿದಂ ॥ ೧೪ ॥

ಎಳೆ ರಸೆಯೊಳಟ್ಟುದಂ ಭುಜ।
ಬಳದಿಂ ಮುನ್ನೆತ್ತಿದಂತೆ ವಿಷಯಾಂಬುಧಿಯೊಳ್॥
ಮಱುಗಿರ್ದೆಮ್ಮಯ್ವರುಮಂ।
ಬಳಿಹರ ಪಿಡಿದೆತ್ತಲೆಂದು ಬಂದೈ ಬರವಂ ॥ ೧೫ ॥

ಬಸಿಱೊಳ್ ಜಗತೀ ತ್ರಯಮುಮ।
ನೊಸೆದಿಟ್ಟೋರಂತೆ ಕಾದ ಪೆಂಪಿನ ನಿಮ್ಮಾ॥
ಬಸಿಱಿಂ ಪೊಕ್ಕೆಮ್ಮಯ್ವರ।
ನಸುರ ಕುಳಾಂತಕ ಕಡಂಗಿ ಕಾವುದು ಪಿರಿದೇ ॥ ೧೬ ॥

1 ರುಂ ಮೂ. (ಸ.)

ಮಲ್ಲಿಕಾಮಾಲೆ॥ ಎನ್ನ ಸನ್ನಿಯ ಪೆಂಪು ನಿನ್ನ ಮಹತ್ವದಿಂದಮೆ
ಸಂದು[1]ದೆ

ತೆನ್ನ ಪನ್ನಗ ಕೇತನಂಗೆ ಧರಾ ವಿಭಾಗಮನಿತ್ತು ಪ
ಪನ್ನ ಯೋಗ ನಿಯೋಗದಿಂದಮರಣ್ಯದೊಳ್
ನೆಲಸಿರ್ದುಣಲ
ಬನ್ನವಿಲ್ಲದೆ ಬಾಟ್ಟುದೇಂ ಪ್ರಬಿವಾನಸಂಗೆನಗಕ್ಕು
॥೧

ವ॥ ಅದಲ್ಲದೆಯುಮೀ ಸೂಚಿಂದುಮೊಡಂಬಡಿಲ್ಲದೆ ಗ
ಗ್ರಹಣಮನೆ ನೆವಂಮಾಡಿ ಸುಯೋಧನನೆಂಬ ಪಾಪಕರ್ಮನ ಮಾ
ನುವರಂ ನಿಮ್ಮನುಬಲದೊಳಮರಿ ಕೇಸರಿಯ ಭುಜ ಬಲದೊಳವೆ
ಗಿಂಬುವಂದುದು—

ಉ॥ ಕಾದದೆ ಪನ್ನಗ ಧ್ವಜನಿಳಾತಳಮಂ ಕುಡನಾನುಮಿರ್ಪುದುಂ
ಸೋದರರೆಂದು ನಾಣ್ಚಿ ಸೆಡೆದಿರ್ದಪೆನಿರ್ದೊಡವಸ್ತುಭೂತನೆಂ
ದಾದಮೆ ಭೂತಳಂ ಪಟಿಯೆ ತೇಜಮೆ ಕೆಟ್ಟಪುದಿಂತಿವರ್ಕೆ ಪ
ದ್ಮೋದರ ನೀನೆ ಪೇಟ್ ಬಗೆದು ಕಜ್ಜಮನೀಗಳೆ ದಿವ್ಯಚಿತ್ತದಿಂ
॥೧

ವ॥ ಎಂಬುದುಮಂಬುಜೋದರಂ ನಯದ ವಿನಯದ ಮಾ
ನೀನೆಂದಂತು ತೊಱೆಗೆ ನೀರಡಕಲುಮಾದಿತ್ಯಂಗೆ ಸೊಡರಿಡಲು
ದ್ರಂಗೆ ದೇವಲೋಕಮಂ ಬಣ್ಣಿಸುವಂತೆಯುಂ ನಿನಗೇನೆಂದು ಕ
ಬೇಟ್ಟುದಾದೊಡಂ—

ಮ॥ ಜಿನಮಾರ್ ಕೊಂಡವೊಲಕ್ಕುಮೊಂದೆ ನಯಮಂ ಕೇಳ್ ನಿನ್ನ
ಮುಂದೀಗಳ
ನುಸಿರ್ದಪ್ಪೆಂ ಸಲೆ ಪೇಲ್ವ ಬಲ್ಪನಱಿಗುಂ ಕೈವಾರಮುಂ ಕೂ
ಕ

1 ದಿಂ. (ಕ. ಖ).

ರಿಸುಗುಂ ನಿಕ್ಕುವಮಪ್ಪ ಕಾರಣದಿನಿಂತೀ ಸಾಮಮುಂ ಮುಂ
ಪ್ರಯೋ।
ಗಿಸದೇಕೆಟ್ಟಪುದೆಂದು ದಂಡಮನೆ ಮುಂ ಮುಂತಿಕ್ಕುವಂ
ಮಂತ್ರಿಯೋ ॥ ೧೯ ॥

ಬಲಿಯಂ ವಾಮನ ರೂಪದಿಂದಮೆ ವಲಂ ಮುಂ ಬೇಡಿದೆಂ
ಭೂರಿ ಭೂ।
ತಲಮುಂ ಕುಂದೆನಗಾಯ್ತೆ ಕೊಂಡೆನಿಳೆಯಂ ಕಟ್ಟಟ್ಟೆನಿನ್ನುಂ
ರಸಾ॥
ತಲದೊಳ್ ದೈತ್ಯನನಂತೆ ನೀನುಮಿಳೆಯಂ ಮುಂ ಬೇಡಿಯಟ್ಟಟ್ಟೆ
ಮಾ।
ರ್ಮಲೆದಾತಂ ಕುಡದಿರ್ದೊಡಂದಿಱಿಯ ನೀಂ ಲೋಕಂ
ಗುಣಂಗೊಳ್ವಿನಂ ॥ ೨೦ ॥

ವ॥ ಎಂದು ನುಡಿದ ಮುಂದರ ಧರನ ನುಡಿಗೆ ಕಿನಿಸಿ ಕಿಂಕಿಱಿವೋಗಿ
ೀಮಸೇನನಿಂತೆಂದಂ—

ಕಂ॥ ನಿಜ ಮತಮನೆನಗೆ ವಿಾಱಿ।
ಲ್ಕಜಾತ ದೊರೆಯಲ್ಲವಲ್ಲದಿರ್ದೊಡಮೆನ್ನಿಂ॥
[1][ದ]ಜನಿಸಿ ನುಡಿಯಿಸಿದುವಹಿ।
ಧ್ವಜನೋವದೆ ಮುನ್ನೆ ನೆಗಟ್ದ ದುಶ್ಚರಿತಂಗಳ್ ॥ ೨೧ ॥

॥ ಆ ಲಾಕ್ಷಾಗೃಹ ದಾಹಮೊಂದೆ ವಿಷಸಂಯುಕ್ತಾನ್ನಮಂತೊಂದೆ
ಪಾಂ।
ಚಾಲೀ ನಿಗ್ರಹಮೊಂದೆ ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ
ಶಾ॥
ರ್ದೂಲಾಭೀಲ ವನಂಗಳೊಳ್ ತಿರಿಸಿದೀಯುರ್ಕೊಂದೆ
ಲೆಕ್ಕಂಗೊಳಲ್।
ಕಾಲಂ ಸಾಲವೆ ಕಂಡುಮುಂಡುಮೆಮಗಿನ್ನಾತಂಗಳೊಳ್
ಪಾಱಿಯೇ ॥ ೨೨ ॥

---

1 ದೆ (ಸ.).

ಕಂ॥ ಜಟಮುಟಿಸಿಕೊಂಡು ನಿಮ್ಮೀ
ಘಟಿಯಿಸುವೀ ಸಂಧಿ ಕೌರವರ್ಕಳೊಳಿನ್ನುಂ॥
ಘಟಿತ ಜರಾಸಂಧೋರ
ಸ್ತಟ ಸಂಧಿಪ್ರೊಲೊಂದೆ ಪೊಯ್ತು ಜಿಯೊಳ್ ವಿಘಟಿಸದೆ
॥

ಉ॥ ತೋಡುವೆನೊರ್ವನೊಳ್ಗರುಳನುರ್ವಿಗೆ ನೆತ್ತರನೆಯ್ದೆ ಪೀದು
ರ್ದಾಡುವೆನೊರ್ವನೂರುಗಳನಿನ್ನ ಗದಾಹತಿ ಘಾತದಿಂದೆ
ಗಾಡುವೆನೆಂದು ಲೋಕಮುಱಿಯುತ್ತಿರೆ ಪೂಣ್ದೆನಗಿಂತೆ ಸಂ
ಮಾಡದೆ ಸಂಧಿ ಮಾಡಿ ಕುರುಪುತ್ರರೊಳಿನ್ನನೆ ಜೋಡುವಾ
॥

ವ॥ ಎಂದು ಮುಸಗಿದ ಮದಾಂಧ ಗಂಧ ಸಿಂಧುರದಂತೆ
ಮುಸಗಿದ ವಾಯುಪುತ್ರನಂ ಧರ್ಮಪುತ್ರಂ ಸಂತೈಸಿ—

ಮ॥ ಬಕ ಕಿರ್ಮೀರ ಜಟಾಸುರೋದ್ಧತ ಜರಾಸಂಧರ್ಕಳಂ ಸಂ
ಚಕರಂ ನೂರ್ವರುಮಂ ಪಡಲ್ವಡಿಸಿದೀ ತ್ವಚ್ಚಂಡ
ದೋರ್ದಂಡ
ಗ್ರ ಕುರುಕ್ಷ್ಮಾಪ ಮಹೀರುಹಪ್ರಕರಮುಂ ಮತ್ತೇಭವಿಕ್ರೀಡಿ
ಕ್ಕೆ ಕರಂ ಪೋಲ್ವೆಗೆ ವಂದು ಭೀಮ ರಣದೊಳ್ ನುಗ್ಗಾಗದ
ಪೋಕುಮೇ ।

ವ॥ ಎಂದು ನಾರಾಯಣನುಂ ಧರ್ಮಪುತ್ರನುಂ ವೃಕೋ
ಮನಮುನಾಱಿ ನುಡಿದು ಮತ್ತಂ ನಾರಾಯಣಂಗೆ ಯುಧಿಷ್ಠಿರಂ
ಕಾರ್ಯಮನನುಷ್ಠಿಸಲೆಂದಿಂತೆಂದಂ—

ಮ॥ ಅವನೀನಾಥನ ಗೆಯ್ದ ಪೊಲ್ಲಮೆಗಮೊನ್ನೊಳ್ಪಿಂಗಮಿಂ ಸಕ್ಕಿ
ಗವನೀವಂತುಟನೀಯದಂತುಟನದಂ ಬಲ್ಲಂತು ಕಾಲ್ಗುತ್ತಿ

1 ದೈತ್ಯ (ಕ.).

ಡವನೀ ಭಾಗದೊಳಿನ್ನ ಭಾಗಮನದಂ ತಾನೀಯದಿರ್ದಾಗಳಿ।
ನ್ನವನೀ ರಕ್ಷಣ ದಕ್ಷ ದಕ್ಷಿಣ ಭುಜಸ್ತಂಭಂ ಕೊಲಲ್ ಸಾಲದೇ
|| ೨೬ ||

ವ|| ಎಂದು ಧರ್ಮರಾಜಂ ರಾಜರಾಜನಲ್ಲಿಗೆ ನಿವ್ಯಾ೯ಜದಿಂ ದಿತಿಜ
ುಳ ವಿಜಯಿಯಪ್ಪಜಿತನನೆ ದೂತ ಕಾರ್ಯಕ್ಕಟ್ಟಿದೊಡಸುರವಿಜಯಿ
ಯುಂ ಕತಿಪಯ ಪ್ರಯಾಣಂಗಳಿಂ ಮದಗಜೇಂದ್ರ ಪುರಮನೆಯ್ದಿ—

ಕಂ|| ಮದ ಗಜ ಬೃಂಹಿತ ಧ್ವನಿ ತುರಂಗಮ ಹೇಷಿತ ಘೋಷದೊಳ್
ಪ್ರೊದ।
ಟ್ಟೊದವೆ ಗಭೀರ ಧೀರ ಮುರಜಧ್ವನಿ ಯೌವನ ಮತ್ತ
ಕಾಮಿನೀ ||
ಮೃದು ಪದ ನೂಪುರ ಕ್ವಣಿತದೊಳ್ ಪೆಣೆದೊಂದಿರೆ
ಚಕ್ರಿಗಂಟುಮಾ।
ಡಿದುದು ಪೊಟಿಲ್ ಸು[1]ರಾದ್ರಿ ಮಥಿತಾಂಬುಧಿ ಜಾತ ನಿನಾದ
ಶಂಕೆಯಂ || ೨೭ ||

ವ|| ಅಂತು ನಾಗಪುರಮು[2]ನಿಱುಸುವ ನಾಗಪುರಮನಾ ನಾಗ
ಯನಂ ಪೊಕ್ಕು ವಿದುರಂ ಪಾಂಡವ ಪಕ್ಷಪಾತಿಯಪ್ಪುದಱಿಂದಾತನ
ನೆಗೆ ವರೆ ತನಗಿದಿರ್ವಂದ ಕೊಂತಿಗಸುರಾಂತಕನೆಱಗಿ ತನಗೆಱಗಿದ
ದುರನಂ ಪರಸಿ ರಥದಿಂದಮಿೞಿದು ಮಣಿಮಯ ಪೀಠದೊಳ್ ಕುಳ್ಳಿರ್ದು
ಾಂಡುತನೂಜರ ಕುಶಲವಾರ್ತೆಯನಱಿಪೆ ತದನಂತರಂ ವಿದುರನ[3]ಜನ
ೀಗೆಯ್ವ ತೆಱನುಮನಱಿಯದೆ—

ಕಂ|| ಶೀವಿದ್ಧ ಮಜ್ಜನದಿಂ ಸ।
ದ್ಭಾವದಿನೊಸೆದೆತ್ತಿದೊಂದು ಬೋನದೊಳಂ ನಾ ||
ನಾ ವಿಧದ ಪದೆಪಿನೊಳ್ ಹರಿ।
ಗಾವಗಮಾಱಿದುದು ಪಥ ಪರಿಶ್ರಮಮೆಲ್ಲಂ || ೨೮ ||

1 ಧಾ (ಕ.). 2 ನೇ (ಕ. ಖ,). 3 ಜರನ (ಖ. ಗ. ಘ.)

ವ || ಅಂತು ವಿದುರನ[1]ಜನನುಚಿತ ಪ್ರತಿಪತ್ತಿಗಳಿಂ ಸಂತಸಂಬಡಿಸಿ ಬಂದ ಬರವನಾಗಳೆ ಸುಯೋಧನಂಗಱಿಪ್ಪುದುಂ ರಾಜರಾಜನುಮದೆ ಕಿಱುನಗೆ ನಕ್ಕು ನಾಳಿನೋಲಗದೊಳ್ ತಂದು ಕಾಣಿಸೆಂಬುದುಂ ಮಱು ದಿವಸಂ ನೇಸಱ್ ಮೂಡಿದಾಗಳಾದಿತ್ಯನಂತನೇಕ ಮಣಿ ಮಯೂಖ ವಿಜೃಂಭ [ಮಾ]ಣಾಖಂಡಳ ವಿಳಂಬಿತಾಭೀಳ ಕೋದಂ[2]ಡ ವಿಳಾಸ ವಿಭ್ರಮ ಸಿಂಹಾಸನಾಸೀನನುಂ ಪ್ರಮದಾ [3]ಹಸ್ತವಿನ್ಯಸ್ತ ವಾಮ ಕ್ರಮ ಕಮಳನುಮನವರತ ಸ್ಫುರಿತ ತಾರಕಾಕಾರ ಮುಕ್ತಾಭರಣ ಕಿರಣ ನಿಕರ ವಿಳಸಿತ ವಿಶಾಲೋರಸ್ಥಳನುಮನಂತ ಸಾಮಂತ ಮಕು[4]ಟ ಮಾಣಿಕ್ಯ ಮಯೂಖ ಮಂಜರೀ ಜಾಳ ಪಲ್ಲವಿತಾಸ್ಥಾನಮಂಟಪನುಮಾಗಿ ಸಭಾ ಮಂಟಪದೊಳೊಡ್ಡೋಲಗಂಗೊಟ್ಟಿಡೆವಱಿಯದವರವರ ಪಡೆದ ಪ್ರತಿ ಪತ್ತಿಗಳನಱಿದಿಕ್ಕಿದ ಲೋಹಾಸನಂಗಳೊಳಂ ಮಣಿಖಚಿತ ಕನಕ ಪೀಠಂ ಗಳೊಳಂ ಕಟ್ಟಿದ ಚಿನ್ನದ ಬೊಂದರಿಗೆಯೊಳಂ ಭೀಷ್ಮ ದ್ರೋಣಾ ಶ್ವತ್ಥಾಮ ಕೃಪ ಕೃತವರ್ಮ ಶಲ್ಯ ಶಕುನಿ ಬಾಹ್ಲೀಕ ಸೋಮದತ್ತ ಭಗದತ್ತ ಭೂರಿಶ್ರವಃ ಪ್ರಭೃತಿಗಳನಿರಿಸಿ ಮತ್ತಮನೇಕ ದೇಶಾಧೀಶ್ವರ ರೆಲ್ಲರು ಮನೆಡೆಯಱಿದು ಕುಳ್ಳಿರಿಸಿ ಪೆಂಡವಾಸದೊಳ್ಪಿಂಡಿಱನೆಱೆದೋಳಿ ಯೊಳಮಿರಿಸಿ ನೂರ್ವರ್ ತಮ್ಮಂದಿರುಮಂ ಪಿಂತಿರಿಸಿ ಲಕ್ಷಣಂ ಮೊದಲಾಗೆ ನೂರ್ವರ್ ಮಕ್ಕಳುಮಂ ಮುಂತಿರಿಸಿ ಯುವರಾಜನಪ್ಪಣುಗ ದುಶ್ಶಾಸನನುಮನಂಗರಾಜನಪ್ಪಣುಗಾಳ್ ಕರ್ಣನುಮನೆರಡುಂ ಕೆಲದೊಳಂ ತೊಡೆ ಸೋಂಕೆ ಕುಳ್ಳಿರಿಸಿ—

ಮ || ನನೆಯಂಬಂ ಮಸೆವನ್ನರಪ್ಪ ಪಲರೊಳ್ಪಿಂಡಿರ್ ಮನಂಗೊಂಡೊಱ
ಲ್ದಿನಮೆತ್ತಂ ಕೊಳೆ ಪಾಡೆ ಜೇನ ಮಱಿಕೊಂಡಂತಪ್ಪ ಗೇಯಂ
ಮನ ||

---

1 ಜರನ (ಖ. ಗ. ಘ.) 2 ಡ ಹಸ್ತ ವಿಳಾಸ (ಖ.ಗ.ಘ.). 3 ಪದನ ಮದ ವಿಸ್ಮಯಭ್ರಮ ವಿನ್ಯಸ್ತ (ಖ. ಗ. ಘ.). 4 ಟ ಮಣಿಕುಟ್ಟಿಮಮಹಾ (ಗ. ಘ.).

ಕ್ಕೆ ನೆಲಕ್ಕಿಟ್ಟಳವಾಗೆ ಸಂದ ರಥಿಕರ್ ಕಣ್ಗೊಳ್ಪಿನಂ ತತ್ಸುಯೋ।
ನೊಡ್ಡೋಲಗಮಿಂದ್ರನೋಲಗಮುಮಂ ಕೀೞ್ಮಾಡಿ ಕಣ್ಗೊಪ್ಪುಗುಂ
॥ ೨೯ ॥

ವ ॥ ಅಂತು ಪಿರಿದೋಲಗಂಗೊಟ್ಟಿರ್ಪನ್ನೆಗಂ ಮುನ್ನಮೆ ಮೂಱ
ು ಬಾಗಿಲೊಳ್ ಬಂದಿರ್ದನಂತನ ಬರವಂ ಪಡಿಯಱಂ ಬಿನ್ನಪಂ
ಯ್ಯೆ ಕುರುರಾಜಂ ಸಿಂಧುತನೂಜನ ಮೊಗಮಂ ನೋಡಿ—

ಕಂ ॥ ಲೋಕ ಗುರು ಶಂಖ ಚಕ್ರ ಗ ।
ದಾ ಕರನತಿಶಯ ಚತುರ್ಭುಜಂ ಜನಜನಿತ ॥
ವ್ಯಾಕುಳದೆ ಬಂದನೆಂದೊಡೆ ।
ಲೋಕದೊಳಿನ್ನೆನ್ನ ದೊರೆಗೆ ಪಿರಿಯರುಮೊಳರೇ ॥ ೩೦ ॥

ವ ॥ ಎಂದು ತನ್ನ ಬೆಸನನೆ ಪಾರ್ದು ಲಲಾಟ ತಟ ಘಟಿತ ಮುಕು
ಕರಕಮಳನಾಗಿರ್ದ ಮಹಾ ಪ್ರತಿಹಾರನ ಮೊಗಮಂ ನೋಡಿ—

॥ ಬರವೇೞ್ಕೆಂಬುದುಮಂಜನಾಚಲದವೋಲ್ ಕಣ್ಗೊಪ್ಪಿ ಬರ್ಪರ್ಂಬುಜೋ ।
ದರನಂ ಮೆಲ್ಲನೆ ನೋಡಿ ಮೆಯ್ಯೆಲ[1]ಸಿದಂತೆಂತಾನುಮೆೞ್ದಿರ್ದು ಕೇ ॥
ಸರಿ ಪೀಠಾಗ್ರದಿನಪ್ಪಿಕೊಂಡು ಪೊಡೆವಟ್ಟುಚ್ಚಾಸನಾಸೀನನಾ ।
ಗಿರವೇೞ್ದಿರ್ಘ್ಯಮನಿತ್ತು ನಂತರಮೆ ತಾಂ ಕುಳ್ಳಿರ್ದು ದುರ್ಯೋಧನಂ ॥ ೩೧ ॥

ವ ॥ ಅಂತು ಮಧುಕೈಟಭಾರಾತಿಯ ಮೊಗಮಂ ನೋಡಿ—

ಕಂ ॥ ಸಂಸಾರದೊಳ್ನಿನ್ನೆನ್ನ ವೊ ।
ಲೇಂ ಸೈಪಂ ಪಡೆವರೊಳರೆ ನೀಂ ಬರೆ ಪೆಱತೇಂ ॥
ಕಂಸಾರೀ ಯುಷ್ಮತ್ಪದ ।
ಪಾಂಸು[2]ಗಳಿಂದಾಂ ಪವಿತ್ರ ಗಾತ್ರನೆನಾದೆಂ ॥ ೩೨ ॥

1 ಸ. (ಕ.). 2 ಲದಿಂ (ಖ. ಗ. ಘ.).

ಬಂದ ಬರವಾವುದಿದು ಬಿಸ |
ವಂದಂ ಬೆಸನಾವುದಾವ ಬೆಸನಂ ಬೆಸಸಲ್ ||
ಬಂದಿರ್ ಬರವಿನೊಳೀಗಳ |
ಗುಂಪಲೆಯಾಂಪ್ತಿನಗಮೀಗಳೆಂಬುದುಮಾಗಳ್ || ೩

ಆ ಸಭೆಯೊಳ್ ಹರಿ ಕರ ವಿ |
ನ್ಯಾಸಂಗಳ್ ನುಡಿಯನಡಕುವಂತಿರೆ ನುಡಿದಂ ||
ಪಾಸುಂ ಪೊಕ್ಕುಂ ಪರೆವು ಸ |
ಭಾ ಸದನಂ ತೊಳಗಿ ಬೆಳಗೆ ದಂತ ಪ್ರಭೆಗಳ್ || ೩

ಅಯ ನಯ ಪರಾಕ್ರಮೋಪಾ |
ಶ್ರಯಂಗಳಂ ಶ್ರೀಗಡರ್ಪುಮಾಡಿದ ನಿನ್ನಿಂ ||
ದ್ರಿಯ ಜಯಮೆ ಕೂಡೆ ಲೋಕ |
ತ್ರಯದಿಂ ಪೊಗಟೆಸಿದುದಿಂತು ಪಿರಿಯರುಮೊಳರೇ|| ೩

ಉನ್ನತನೆ ಆಗಿಯುಂ, ನುಡಿ |
ನನ್ನಿಯನಳವಣ್ಮನಜೆವು ವಿನಯಮನಾದಂ ||
ಮನ್ನಣೆ ಗುರು ಜನಮುಂ ನೆಜೆ[1] |
ಮನ್ನಿಸಿದುದು ಪಿರಿಯ ಸಿರಿಯೊಳೇಂ ಸುಜನತೆಯೋ
|| ೩

ಕುವಳಯ ಬಾಂಧವನೆನಿಪನೆ |
ಕುವಳಯಮುಂ ಬೆಳಗಿ ಕುವಳಯಂ ಪೊಜಗೆನೆ ಪಾಂ ||
ಡವರೆ ಪೊಜಗಾಗೆ ನಿನಗೀ |
ಕುವಳಯ ಪತಿಯೆಂಬ ಪೆಂಪ್ಪೊಡಂಬಡೆ ನೃಪತೀ || ೩

---

1 ನೆ (ಖ. ಗ. ಘ.).

ಮನಕತದಿಂದೊಂದೊರ್ವರ ।
ನಿನಿಸನಗಲ್ದಿ[1]ರ್ದಿಸೆರಿನಿ ನಿಮಗಂ ತಮಗಂ ॥
ಮುನಿಸುಂಟೆ ಕಾಯ್ದು ಬೆನ್ನಿೀರ್ ।
ಮನೆ ಸುಡದೆಂಬೊಂದು ನುಡಿಯವೋಲ್
ಕುರುರಾಜಾ ॥ ೩೮ ॥

ಪೊಂಗುವ ಮಲೆಪರ [2] ಮಲೆಗಳ ।
ಡಂಗಂ [3][ಕ] ಣ್ಮಲೆವ ಮಂಡಲಂಗಳ್ ಪ್ರತ್ಯಂ ॥
ಶಂಗಳೆನಲೊಳವೆ ಪಾಂಡವ ।
ರಂಗೆಡೆಗೊಳೆ ನಿನಗೆ ಕುರಕುಳಾಂಬರ ಭಾನೂ ॥ ೩೯ ॥

ಪಟ್ಟದ ಮೊದಲಿಗರ್ರಾಜಿಗೆ
ಜಟ್ಟಿಗರವರೆಂದು[4] ಮಾಳ್ಪ ಮನ್ನಿನ ನೆಲನಂ ॥
ಕೊಟ್ಟು ಬೞಿಯಟ್ಟು ನಿನಗೊಡ ।
ವುಟ್ಟಿದರಾ ದೊರೆಯರಾಗೆ ತೀರದುದುಂಟೇ ॥ ೪೦ ॥

ಮುನ್ನಿನ ನೆಲನಂ ಕುಡುಗೆಮು ।
ಗೆನ್ನರ್ ದಾಯಿಗರೆಮೆನ್ನರಂತಲ್ತಿಂತ ॥
ಲ್ತೆನ್ನರ್ ಕರುಣಿಸಿ ದಯೆಯಿಂ ।
ದಿನ್ನಿತ್ತುದೆ ಸಾಲ್ಗುಮೆಂಬರೆಂಬುದನೆಂಬರ್ ॥ ೪೧ ॥

॥ ಕರಿ ಕಳಭ ಪ್ರಚಂಡ ಮೃಗರಾಜ ಕಿಶೋರ ಕಠೋರ ಘೋರ
ಹೂಂ ।
ಕರಣ ಭಯಂಕರಾಟವಿಯೊಳಿನ್ನೆವರಂ ನೆಲಸಿರ್ದ ಸೇದೆ ನೀಂ ॥
ಕರುಣಿಸಿದಾಗಳಲ್ಲದವರ್ಗಾಱಿದು ಕೆಮ್ಮಗೆ ನಾಡ ಚಲ್ಲ[5]ವ ।
ತ್ತರ ನುಡಿಗೊಳ್ಳದಿರ್ ನಿನಗೆ ಪಾಂಡವರಪ್ಪುದನಾರುಮಪ್ಪರೇ
॥ ೪೨ ॥

---

1 ದ್ರ್ಗವಿ (ಕ.). 2 ತ (ಘ.). 3 ತಣ್ಮ (ಕ. ಖ.), ಗಳ್ಮ (ಗ.), (ಘ.). 4 ಮಾೞ್ಪಿ (ಕ. ಖ.), ಬಾಳ್ವ (ಗ.). 5 ವು (ಖ. ಗ. ಘ.).

ಉ || ಒಂದುಮೊಡಂಬಡುಂ ಪೊರೆಯುಮಿಲ್ಲವರ್ಗೆಂಬುದನೆಯ್ದೆ ನಂಬ

ಡಂ ದಯೆಗೆಯ್ದು ನೀಂ ಕುಡುವಿನಂ ಪೆಱತೇ ಪಡೆಮಾತೊ ಪ

ಲ್ದೆಂಡವರ್ಗೀವುದೊಳ್ಪು ನಿಲೆ ಕಂಚಿ ನೆಗೞ್ತೆಯ ವಾರಣಾಸಿ

ಕಂದಿ ಕುರುಸ್ಥಳಂ [ವರ ವೃಕಸ್ಥಳ] ಮೆಂಬಿವನಯ್ದು ಬಾಡ

|| ೬

ವ || ಎಂಬುದುಂ ಸುಯೋಧನಂ ಕ್ರೋಧಾನಲೋದ್ದೀಪಿತ ಹೃ

ನಾಗಿ ಶೌರ್ಯಮದಾಡಂಬರದೊಳಂಬರಂಬರಂ ಸಿಡಿಲ್ದು—

ಚಂ || ತೊಲಗದೆ ಗೋವುಗಾದ ಕಿಱಿಯಂದಿನ ಗೋವಿಕೆ ನಿನ್ನ

ಚಿತ್ತದೊ

ನೆಲಸಿದುದಕ್ಕುಮಗ್ಗಳದ ವೈಷ್ಣವ ಮೋಹಮೆ ನಿನ್ನ ಮೆಯ್ಯೊ

ಗ್ಗಲಿಸಿದುದಕ್ಕುಮಾ ಜಡಧಿ ಸಂಗತಿಯಿಂ ಜಡಬುದ್ಧಿ ಬುದ್ಧಿಂ

ತೊಲಗಿಸಿತಕ್ಕುಮಲ್ಲದೊಡೆ ನೀನಿನಿತಂ ನುಡಿವೈ ಪಳಾಳಮುಂ

||

ಕಂ || ಪಱಿಪಟ್ಟ ಪಗೆವರಂ ನೆಱಿ ।

ಪಱಿಪಡಲ್ಪಣಯ್ಯೀಯದವರನವರ್ಗಳ ಬಾಟಿಯೊಳ್ ||

ನಿಱಿಸಲ್ ಬಗೆದೈ ಕರಮೆನ |

ಗುಜಿದಿರ್ಕುಮೆ ನಿನ್ನ ಪೇೞ್ದ ಧರ್ಮ ಶ್ರವಣಂ || ೬

ಉ || ಭಾಗಮನಾಸೆವಟ್ಟಳಿಪಿ ಬೇೞ್ಪುದು ನಿನ್ನಯ ಕಲ್ತ ವಿದ್ದೆ ನೀ

ನಾಗಳುಮಣ್ಣ ಬೇಡಿದಪೆ ಸಜ್ಜನದಂತೆನಗೆಕ್ಕ ಬಾಗನೋ || ೬

ಡೀಗಳಿಳಾ ಲತಾಂಗಿ ಪುದುವಲ್ಲಳದೆಂತೆನೆ ಮುನ್ನ ನೂಲ ತೊ

ಡಾಗದೆ ಕೆಟ್ಟು ಪೋದವರನಿಂ ಮಗುೞ್ದಂ ನಿಱಿಪಂತು ಬೆಳ್ಳ

|| ೬

|| ವಿಜಿಗೀಷುತ್ವದೊಳೊಂದಿ ಗೋವುಳಿಗನಪ್ಪಂ ಮ[1]ತ್ಸ್ಯನಾಳಾಗಿ ವಾ|
ರಿಜನಾಭಂ ಹರಿಯೆಂಬ ದೊ[2]ಡ್ಡಿವೆಸರಂ ಪೊತ್ತಿರ್ದ ನೀಂ ಮಂತ್ರಿಯಾ ||
ಗೆ ಜಯೋದ್ಯೋಗಮನೆತ್ತಿಕೊಂಡು ರಣದೊಳ್ ಭೂಭಾಗಮಂ ನೆಟ್ಟನ್ಪೊ|
ಟ್ಟಜೆಯಿಂದಂಜಿಸಿಕೊಳ್ಳದಿ[3]ರ್ಪಿರೆ ಸಮಂತಾ ಗಂಡರೀ ಗಂಡರಂ || ೪೭ ||

|| ಪುಸಿಯೆನೆ ಸಾಮಮಂ ನುಡಿದು ಭೇದಮನುಂಟೊಡತಾಗೆ ಮಾಡಿ ಛಿ|
ದ್ರಿಸಲೊಳಪೊಕ್ಕು ಮಿಕ್ಕು ನೆಗಟ್ದುಗ್ರ ವಿರೋಧಿಗಳೆತ್ತಮೆಯ್ದೆ ಬಂ||
ಚಿಸಿ ಪೊಱಗಣ್ಗೆ ಸಯ್ದರೆನೆ ತಾವೊಳಗಂ ತವೆ ತೋಡಿ ತಿಂದು ರ|
ಕ್ಷಸಿಯರ ಕಂಡ ಕುಂಬಳದ ಮಾಟ್ಕೆಪೊಲಾಗಿರೆ ಮಾಡದಿರ್ಪಿರೇ ||೪೮||

ವ || ಸಾಮೆಲ್ಲಮೊಂದೆ ಗರುಡಿಯೊಳೋದಿದ ಮಾನಸರೆಮ್ಮಂ
ಡಿ ಕೆಮ್ಮನೆ ಬಱಲಿಸಲ್ವೇಡ ಬಂದ ಬಟ್ಟೆಯಿನೆ ಬಿಜಯಂಗೆಯ್ಯಿ
ಮುರಾಂತಕನಂತಕನಂತೆ ಮಾಮಕೆಸಂ ಮುಸಗಿ ದುರ್ಯೋಧನನ
ಂದಂ—

| ಸೀತೆಯ ದೂಸಱಿಂದಱಿದ ರಾವಣನಂತಿರೆ ನೀನುಮೀಗಳೀ |
ಸೀತೆಯ ದೂಸಱಿಂದಱಿಯಲಾಟಿಸಿದ್ದೈ ನಿನಗಂತು ಸೀತೆಯೇ ||
ಸೀತೆ ಕಡಂಗಿ ಕಾಯ್ದು ಕಡೆಗಣ್ಚಿದಳಪ್ಪೊಡೆ ಧಾತ್ರನಿಂ ತೊದ |
ಖ್ಯಾತಿನೊಳೇನೊ ಪಾಂಡವರ ಕೆಯ್ಯೊಳೆ ನಿನ್ನ ನಿಸೇಕಮಾಗದೇ || ೪೯ ||

ಆರ್ಕಡುಕೆಯ್ದು ಪಾಂಡವರೊಳಾಂತಿಱಿಯಲ್ ನೆರೆವನ್ನರಿಂತಿದೇ|
ತರ್ಕೆ ಬಿಗುರ್ತಪ್ಪೈ ನೆಲನನೊಪ್ಪಿಸಿ ತಪ್ಪದೆ ಬಾಱ್ಪೆನೆನ್ನದೀ ||

1 ತ್ಯ? (ಪ.). 2 ದ್ದೆ (ಕ.) 3 ರ್ಪ? (ಪ.).

ಯುರ್ಕೆನೊಳಿಂತು ನಿಂದು ಸೆಣಸಲ್ ಬಗೆ ಬಂದುದು ನಿನ್ನ
ಮೆಯ
ತ್ತ ರ್ಕುದಿದುರ್ಕಿ ಸಾವ ಬಗೆಯಿಂ ಸೆಣಸಲ್ ಬಗೆ ಬಂದುದಾ
॥

ಕಂ ॥ ಮುಳಿಯಿಸಿ ಬರ್ದುಂಕಲಾ[1]ದನು ।
ವೊಳನೆ ಯುಧಿಷ್ಠಿರನನಮಳರಳವೆಂಬುದು ಭೂ ॥
ವಳಯ ಪ್ರಸಿದ್ಧಮರಿನೃಪ ।
ಬಳಂಗಳವ[2]ರಿಱಿಯೆ ಪೆಳಱಿವೆಂಬವುವೊಳರೇ ॥

ಚಂ ॥ ಗಜೆಗೊಳೆ ಭೀಮಸೇನನಿದಿರಾಂತು ಬರ್ದುಂಕುವ ವೈರಿ ಭೂ
ಧ್ವಜಿಸಿಗಳಿಲ್ಲದಲ್ಲದೆಯುಮೀ ಯುವರಾಜನ ನೆತ್ತರಂ ಕುರು
ಧ್ವಜಿನಿಯೆ ನೋಡೆ ಪೀರ್ದು ಭವದೂರುಯುಗಂಗಳನಾಜಿರ
ದೊ
ಗಿಜಿ ಗಿಜಿಮಾಡಲೆಂದವನ ಪೂಣ್ದುದು ನಿಕ್ಕುವಮಾಗದಿರ್ಕು
॥

ವ ॥ ಅದಲ್ಲದೆಯುಂ ರಾಜಸೂಯ ವ್ಯತಿಕರದೊಳ್ ದಿಗ್ವಿಜ
ಗೆಯ್ದು ಲಂಕೆಯ ವಿಭೀಷಣನನೊಂದೆ ದಿವ್ಯಾಸ್ತ್ರದೊಳೆಚ್ಚು ಕಪ್ಪಂಗೆ
ವಿಕ್ರಮಾರ್ಜುನನ ವಿಕ್ರಮಮುಮಂ ಕಾಪಿನ ದೇವರೊಂದು ಪೊಱ
ಲದ ನೂಱು ಯೋಜನದಳವಿಯ ಖಾಂಡವ ವನಮನನಲಂಗ
ರಾತಿಕಾಳಾನಳನಳವುಮಂ ಜವನನವಯವದೊಳ್ ಗೆಲ್ದು ಪಾ
ಪಿಳ್ಳೆಯ ಪೋದ ಪ್ರಾಣಮಂ ತಂದ ಸಾಹಸಾಭರಣನ ಸಾಹಸ
ನಿಂದ್ರಕೀಲ ನಗೇಂದ್ರದೊಳಿಂದ್ರನ ಬೆಸದೊಳ್ ತಪೋವಿಘಾತಂ
ಲೆಂದು ಬಂದ ಪುರಂದರನ ಗಣಿಕೆಯರ ಕಡೆಗಣ್ಣ ನೋಟಕ್ಕಂ ಕ
ಮಕ್ಕದ ಶೌಚಾಂಜನೇಯನ ಶೌಚಮುಮಂ ದಾನವಾಧಿಪನಪ್ಪ
ದಾನವ ಸೂಕರನನೊಂದೆ ಸೂಟಿಂಬಿನೊಳೆಚ್ಚು ಕೊಂದ ಪರಾಕ್ರ
ಳನ ಪರಾಕ್ರಮಮುಮಂ ತ್ರಿಣೇತ್ರನೊಳ್ ಕಾದಿ ಪಾಶುಪತಾ

1 ವ (ಗ. ಘ.). 2 ರ (ಕ.ಖ.ಗ.).

ಡೆದ ಕದನತ್ರಿಣೇತ್ರನ ಗಂಡ ಗರ್ವಮುಮನಿಂದ್ರಲೋಕಕ್ಕೆ ಪೋಗಿ
ೀವೇಂದ್ರನ ಪಗೆವರಪ್ಪ ನಿವಾತ ಕವಚ ಕಾಳಕೇಯ ಪೌಳೋಮ ತಳ
ಾಳುಕರೆಂಬ ದೈತ್ಯರಂ ಪಡಲ್ವಡಿಸಿದ ಪಡೆಮೆಚ್ಚೆಗಂಡನ ಗಂಡುಮಂ
ೀವೇಂದ್ರನೊಳರ್ಧಾಸನಮೇಱಿದ ಗುಣಾರ್ಣವನ ಮಹಿಮೆಯುಮಂ
ಳುಕ್ಯ ಕುಳತಿಳಕನಪ್ಪ ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ
ರದೆ ಪೆಱಗಿಕ್ಕಿ ಕಾದ ಶರಣಾಗತ ಜಳನಿಧಿಯ ಪೆಂಪುಮಂ ಗೊಜ್ಜಿಗ
ಬ ಸಕಲ ಚಕ್ರವರ್ತಿ ಬೆಸ[1]ಸೆ ದಂಡುವಂದ ಮಹಾ ಸಾಮಂತರಂ
[2]ರಲಿಱಿದು ಗೆಲ್ದ ಸಾಮಂತ ಚೂಡಾಮಣಿಯ ಬೀರಮುಮನತಿ
ರ್ತಿಯಾಗಿ ಮಾರ್ಮಲೆವ ಚಕ್ರವರ್ತಿಯಂ ಕಿಡಿಸಿ ತನ್ನ ನಂಬಿಬಂದ
ದ್ದಿಗದೇವಂಗೆ ಸಕಳ ಸಾಮ್ರಾಜ್ಯಮನೋರಂತು ಮಾಡಿ ನಿಱಿಸಿದರಿ
ಸರಿಯ ತೋಳ್ವಲಮುಮಂ ಸಮದಗಜ ಘಟಾಟೋಪಂಬೆರಸು ನೆಲ
ವಿರಿವಂದು ತಾಗಿದ ಕಕ್ಕಲನ ತಮ್ಮನಪ್ಪ ಬಪ್ಪುವನಂಕಕಾಱನನೊಂದೆ
ದಾಂಧಗಂಧ ಸಿಂಧುರದೊಳೋಡಿಸಿದ ವೈರಿಗಜಘಟಾವಿಘಟನನದ
ಮುಮಂ ಪರಚಕ್ರಂಗಳನಂಜಿಸಿದ ಪರಸೈನ್ಯ ಭೈರವನ ಮೇಗಿಲ್ಲದ ಬಲ್ಲಾ
ನಮುಮಂ ಕಂಡುಂ ಕೇಳ್ದುಂ ನಿನಗೆ ಸೆಣಸಲೆಂತು ಬಗೆ ಬಂದಪುದು—

|| ನೆಟ್ಟನೆ ಬೂತುಗೊಳ್ವ ತೆಱದಿಂ ದಶಕಂಧರನಾಡಿ ಪಾಡಿ ನಾ ।
ಣ್ಗೆಟ್ಟರೆ ಕೊಂಡನಲ್ಲದೆ ಬರಂಗಳನೀಶ್ವರನಲ್ಲಿ ಪೇೞ್ವಿಮಾ ||
ವೊಟ್ಟಜೆಯಿಂದೆ ಕೊಂಡನೆನುತುಂ ವಿಜಯಂ ನೆಲಕಿಕ್ಕಿ ಗಂಟಲಂ ।
ಮೆಟ್ಟದೆ ಕೊಂಡನೇ ಹರನ ಪಾಶುಪತಾಸ್ತ್ರಮನಿಂದ್ರಕೀಲದೊಳ್
|| ೫೩ ||

ಪೊಂಗಿ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ ನಿ ।
ನ್ನಂಗನೆಯರ್ ತೊವಲ್ಗೊಳೆ ಭಯಂಗೊಳೆ ಕೋಡಗಗಟ್ಟುಗಟ್ಟಿ
೫೪ ||

1 ಸಿ ದಂಡು (ಕ.). 2 ರಳಲಿ (ಘ.).

ತ್ರಾಂಗದನುಯ್ಯೆ ನಿನ್ನ ನೆಡೆಮಾಡದನುಂಗೊಳೆ ಕಾದಿ ತಂದ
ರಂಗರಿಗಂಗೆ ನೀಂ ಮಲೆದು ನಿಲ್ಪುದು ಪಾಟಿವಲಂ
ಸುಯೋಧನಾ ||

ಮ || ಸ್ರ || ಗುರುವಿಲ್ಲಾ ಕರ್ಣನಿಲ್ಲಾ ಗುರುವಿನ ಮಗನಿಲ್ಲಾ ಕೃ
ಚಾರ್ಯನಿ

ಕುರುರಾಜಾ ನಿನ್ನ ತಮ್ಮಂದಿರೊಳಿನಿಬರೊಳಾರಿಲ್ಲ ಗಾಂಗೇ
ನಿ

ಮರುಳೇ ಗಾಂಡೀವಿ[1]ಯಾರೆಂದೆಣಿಕೆಗ[ಳೆ]ವೆ ಗಂಧರ್ವ[2]ರು
ಯ್ವಂದು ನಿ

ಕರುವಿಟ್ಟಂತಿರ್ದು[3]ದಿಲ್ಲಾ ನೆರೆದ ಕುರುಬಲಂ ತಂದವಂ
ಪಾರ್ಥನಲ್ಲಾ ||

ಮ || ಬವರಂಗೆ[4]ಯ್ವಮಮೋಘಮೆಂಬ ಬಗೆಯಿಂ ನೀಮೆಲ್ಲಮಾದ
ರಣ

ತ್ಸವದಿಂ ನಿನ್ನೆಯೆ ಪೋದ ಗೋಗ್ರಹಣದಂದೇನಾದಿರಂ[5]
[ತಾ]

ಭವಮಂ ಚಿಃ ಮಱೆದಿರ್ದಿರಪ್ಪೊಡಮದೇನೇಪೋದುದಿನ್ನು
ಗ

ರ್ಣವನಿಂ ನಾಳೆಯೆ ಕೇಳದಿರ್ಪಿರೆ ಮಹಾ ಗಾಂಡೀವ
ನಿರ್ಘೋಷಮಂ ||

ಚಂ || ಸುರಿವ ಸರಲ್, ನರಲ್ವ ಭಟರೆತ್ತಮುರುಳ್ವ ದಟಿಂ ಪೊರಳ್ವ
ಧುರ ಘಟೆ ಬರ್ಪ ನೆತ್ತರ ಕಡಲ್ ಕುಣಿವಟ್ಟೆಗಳಾಜಿಯೊಳ್ ಭ

---

1 ಯೆಂದೇಳಿಸಿದಪೆ (ಕ). ಯೆಂದೆಳಿಸಿನುಡಿವೆ (ಖ. ಘ.). ಯಾರೆಂದೆಣಿ
(ಗ). ಯೆಂದೆಂಡಿಳಿಸಿ ನುಡಿವೆ (ಘ.), 2 ನು (ಕ.ಗ.). 3 ದೆಲ್ಲಂ ನೆರೆದ (ಕ
ದಿರ್ಪಾಬೆರೆದ (ಖ.), ದಿಲ್ಲಾ ಬೆರೆದ (ಘ.), ದಿಲ್ಲಾ ಬೆಱೆತ ? (ಪ). 4
(ಕ.). 5 ತುಂ (ಕ.) ತೊಂದು ಪರಿ (ಖ. ಗ. ಘ.).

ಕರತರಮುಪ್ಪಿನಂ ಪಗೆವರೊಕ್ಕಲೊಳೋವೆನಲೊರ್ವರಿಲ್ಲದಂ।
ತಿರಿ ತವೆ ಕೊಲ್ಗುಮಂತುಮರಿಕೇಸರಿಗಾಂತು ಬರ್ದುಂಕಲಕ್ಕುಮೇ
|| ೫೭ ||

ವ|| ಎಂದು ಕಾಳ ನೀಳ ಮೇಘದಂತು ಮಸಗಿ ಗರ್ಜಿಸುವಸುರ ಕುಳವಿಳಯ ಕೇತುಗೆ ಫಣಿಕೇತು ಮುಳಿದು [1][ತ]ಳಮುಳಿಸಿ ಕಣ್ಣಾಣದೆ—

ಕಂ|| ಎಟ್ಪೋಗು ದೂತನಪ್ಪನ।
ಬೆಟ್ಟಿನ ನುಡಿಗೇಳ್ದು ಮುಳಿಯಲಾಗದು ನೀನುಂ||
ಮೆಟ್ಟಿಟ್ಟು ವಿದುರನೆಂಬೀ।
ತೊಟ್ಟಿಟ್ಟಿಯ ಮನೆಯ ಕೂಟಿ ನುಡಿಯಿಸೆ ನುಡಿದೈ
|| ೫೮ ||*

ವ|| ಎನೆ ವಿದುರನತಿ ಕುಪಿತ ಮನನಾಗಿ—

ಕಂ|| ಕಡುಮುಳಿದು ನಿನ್ನ ತೊಡೆಗಳ
ನುಡಿವೆಡೆಯೊಳ್ ಭೀಮಸೇನನಾನಾ ಪದದೊಳ್||
ಪಿಡಿಯಲ್ಕೆಂದಿರ್ದೆನಿದಂ।
ಪಿಡಿಯೆಂ ಪೋಗೆಂದು ಸಭೆಯೊಳುಡಿದಂ ಬಿಲ್ಲಂ || ೫೯ ||

ವ|| ಅಂತು ವಿದುರಂ ವಿಚ್ಛಿದುರ ಮನನಾಗಿ ಬಿಲ್ಲನುಡಿವುದುಂ ಸುಯೋಧನಂ ತನ್ನ ಬಲದ ತೋಳುಡಿದಂತಾಗಿ ಸಿಗ್ಗಾಗಿ ಬಾಳಂ ೞಟ್ಟೊದಱು ಮನದೊಳಾದೇವದಿಂ ದೇವಕೀನಂದನನ ಮೇಲೆ ವಾಯ್ವು ಜುಂ ನಂಜಿನ ಮೇಲೆ ವಾಯ್ವ ನೊಳವಿನಂತುರುಳ್ತರೆ ಪಾಯ್ದು—

ಉ|| ಮೂಱಡಿ ಮಾಡಿದಂದು ನೆಲನೆಲ್ಲಮನಾ ಬಲಿಗಾದ ರೂಪಮುಂ।
ತೋಱಿದನೀ ಜಗತ್ತ್ರಯಮನೊರ್ಮೆಯೆ ನುಂಗುವ ಕಾಲ
ರೂಪಮುಂ||

---

1 ಕಳವ (ಕ. ಖ. ಗ.). ಕಳಮು (ಘ.).

* ಕ. ಪ್ರತಿಯಲ್ಲಿ ಈ ಪದ್ಯದ ಪ್ರತಿಪಾದದ ಮೊದಲನೆಯ ಅಕ್ಷರವೂ ದೀರ್ಘವಾಗಿ ಕೊಟ್ಟಿದೆ.

ತೋಱಿದನಂತೆ ರೌದ್ರತರ ರೂಪಮನೊರ್ಮೆಯೆ ವಿಶ್ವರೂಪ
ತೋಱಿದನಿರ್ದರಂ ನೆಱೆಯೆ ಮೋಹಿಸಿ ವೈಷ್ಣವದಿಂ ಮುರಾ
||

ವ|| ಆಗಳ್ ಧೃತರಾಷ್ಟ್ರಂ ಬಂದು ಮುಕುಂದನನೇಕ ಸ್ತು
ಸಹಸ್ರಂಗಳಿಂ ಸ್ತುತಿಯಿಸಿದೊಡಾತಂಗೆ ವರದನಾಗಿ ದಿವ್ಯ ದೃಷ್ಟಿ
ದಯೆಗೆಯ್ದು ಮುನ್ನಿನಂತೆ ಮನುಷ್ಯ ದೇಹಮಂ ಕೆಯ್ಕೊಂಡು ತ್ರೈಲ
ಗುರು ಗುರುತನೂಜನ ಕೆಯ್ಯಂ ಪಿಡಿದರಮನೆಯಂ ಪೊಱಮಟ್ಟು
ಪ್ರಪಂಚದಿಂದಾತನುಮಂ ತನಗೆ ಮಾಡಿ ಬೀಡಿಂಗೆ ವಂದು ಕು
ಕಾಂತದೊಳಿಂತೆಂದಂ—

ಚಂ|| ಗುರು ಕೃಪ ಶಲ್ಯ ಸಿಂಧುಸುತರಪ್ಪೊಡೆ ನಮ್ಮಯ ಪಕ್ಷ[1]
ಮೊಂದಿ
ಗುರುಸುತನೀಗಳೆಮ್ಮೊಳಖಿಳಾಸ್ತ್ರ ವಿಶಾರದನಪ್ಪನುಂ ಗೆಲ||
ಲ್ಕರಿಯನುಮೊಂದಿ ಬಾರದನುಮಂಕದ ಕರ್ಣನೆ ಬೀರ[2] ಮಾ
ದುರಿವರಿದತ್ತು ಚಾಗಮುವನಿಂದೆಸೆದತ್ತು ಸಮಸ್ತ ಧಾತ್ರಿಯೊ
||

ಉ|| ಎಂತೆನೆ ವಜ್ರಿ ವಜ್ರ ಕವಚಕ್ಕೆ ನಿಜೋಜ್ವಳ ಕುಂಡಳಕ್ಕೆ ಕೆ
ಯ್ಯಾಂತೊಡೆ ಪಾಂಡುಪುತ್ರರನೆ ಕಾ[3] ದೆರೆವಂದುಗಿವಂ ದಲೆಂ
ಮಂತಣದಿಂದೆ ಬಾರಿಸೆಯುಮೆಂದುದನೆನ್ನದೆ ಮೀಱಿ ಕೊಟ್ಟ
ರಂತು ಜಸಕ್ಕೆ ನೋಂತು ಬಿಡೆ ನೇರ್ದೊಡಲೊಳ್ ತೊಡದಾ
ತನುತ್ರಮಂ ||

ಮ|| ಬರವಂ ಬೇಡಿದರ್ಗೀವ ದೇವನೆ ವಲಂ ನಾಣ್ಗೆಟ್ಟು ಬಂದೆನ್ನ
ತೆರೆದಂ ಬ[4]ರ್ದರೊಳಾನೆ ಬ[5][ರ್ದ]ನೆನುತುಂನೇ[6]ರ್ವಲ್ಲಿ
ಕೆನ್ನೆತ್ತ

1 ವೆಂದಿ (ಕ. ಖ.), ದಿಂದ (ಗ.). 2 ನಾತಸಿಂ (ಕ.), ಪಂತನೆಂ
3 ಯ್ದಿರೆ ವಂದನಿ (ಖ.), ಯಿದಿರೆವಂದುಗಿ (ಗ.), ಯ್ದಿರೆವಂದನಿ
4 ಬ್ದಿ ? (ಪ.). 5 ರ್ದೆ (ಸ.). 6 ರ್ದ (ಕ. ಖ.).

ಬಿರಿ ಕಂಡಂಗಳೆ ಬೀೞಲುಣ್ಮೆ ಮನದೊಂದಣ್ಮೆಟ್ಟಳಂ ಪೊಣ್ಮೆ ವೀ।
ರ ರಸಕ್ಕಾಗರವಾಯ್ತು ನೋಡೆ ಕವಚಂಗೊಂಡಂದಮಾ
ಕರ್ಣನಾ ॥ ೬೩ ॥

ವ॥ ಅಂತು ಸಹಜ ಕವಚ ರತ್ನ ಕುಂಡಲಂಗಳಂ ನೆತ್ತರ್ ಪನಪನ
ಯೆ ತಿದಿಯುಗಿವಂತುಗಿದು ಕೊಟ್ಟುದರ್ಕೆ ಮೆಚ್ಚಿ ದೇವೇಂದ್ರನಾತಂಗ
ೀಘ ಶಕ್ತಿಯನಿತ್ತನಾತನಂ ನಾನುಮೆನ್ನ ಬಲ್ಲ ಮಾೞ್ಕೆಯಿಂ
ದಿಸಿ[1]ದಪ್ಪೆಂ ನೀಮುಂ ನಿಮ್ಮ ಚೊಚ್ಚಿಲ ಮಗನಪ್ಪ ಸೂರ್ಯಸೂನುವಂ
ರ್ಯ ದಿನದಂದು ಕಂಡು ಕಾರ್ಯಸಿದ್ಧಿಯಂ ಮಾಡಿಬನ್ನಿಮೆಂದು
ಂತಿಯಂ ಬೀೞ್ಕೊಂಡು ಪರಕೆಯ[2][ಂಕೈಕೊ]ಂಡು ರಥಾಂಗಧರಂ
ಮನೇೞು ಕರ್ಣನ ಮನೆಯ ಮುಂದನೆ ಬಂದು ಮೇಲೆ ಬಿ[3][ಟ್ಟಿ]ಮ್ಮಂ
ೞದಂತರಂ ಕಳಿಪಿ ಮಗುೞ್ವೆ ಬಾ ಪೋಪಮೆಂದು ತನ್ನೊಡನೆ ರಥಮ
ೞಿಸಿಕೊಂಡು ಪೋಗಿ ಮುಂದೊಂದೆಡೆಯೊಳ್ ನಿಂದು—

॥ ಭೇದಿಸಲೆಂದೆ ದಲ್ ನುಡಿದರೆನ್ನದಿರೊಯ್ಯನೆ ಕೇಳ ಕರ್ಣ ನಿ।
ನ್ನಾದಿಯೊಳಬ್ಬೆ ಕೊಂತಿ ನಿನಗಮ್ಮನಹ[4]ರ್ಪತಿ
ಪಾಂಡುನಂದನರ್ ॥
ಸೋದರರೆಯ್ದೆ ಮಯ್ದುನನೆನಾಂ ಪೆಱತೇಂ ಪಡೆಮಾತೊ ನಿನ್ನದೀ।
ಮೇದಿನಿ ಪಟ್ಟಮುಂ ನಿನತೆ ನೀನಿರೆ ಮತ್ತೆ ಪೆಱರ್ ನರೇಂದ್ರರೇ
॥ ೬೪ ॥

ಕಂ॥ ಗಂಗೆಗೆ ಕೆಯ್ಯೆಡೆಯೆಂದು॥
ತ್ತುಂಗ ಸ್ತನಿ ಕೊಟ್ಟು ಪೋಗೆ ಸೂತಂ ಕಂಡಾ॥
ತ್ತ್ಯಾಂಗನೆಗೆ ರಾಧೆಗಿತ್ತು ಮ।
ನಂಗೊಳೆ ರಾಧೇಯನೆನಿಸಿ ಸೂತಜನಾದೈ ॥ ೬೫ ॥

ನಿನ್ನುತ್ಪತ್ತಿಯನಿಂತೆಂ।
ದೆನ್ನರುಮಣಮುಱಿಯರಱಿವೆನಾಂ ಸಹದೇವಂ॥

1 ಬರ್ಪೆಂ (ಖ). 2 ಸಿದಿರ್ಗೊ (ಕ. ಗ. ಘ.). 3 ರ್ದೆ (ಸ.)
ಪ್ಪ (ಘ†.).

ಪನ್ನಗಕೇತು ದಿನೇಶಂ।
ನಿನ್ನಂಬಿಕೆ ಕುಂತಿಯಿಂತಿವರ್ ನೆಱೆ ಬಲ್ಲರ್ ॥೬೬

ವ॥ ದುರ್ಯೋಧನಂ ನಿನ್ನನೇತಱೊಳ್ ನಂಬಿದನೆಂದೊ
ನೀನುಂ ತಾನುಮೊರ್ಮೆ ಗಂಗಾನದೀ ತೀರದೊಳ್ ಬೇಂಟೆಯಾಡುವ
ತತ್ಸಮೀಪದ ತಾಪಸಾಶ್ರಮದೊಳ್ ಸತ್ಯಂತಪರೆಂಬ ದಿವ್ಯ ಜ್ಞಾನಿಗ
ಕಂಡು ಪೊಡೆವಟ್ಟಿರ್ವರುಮಂ ಪರಸಿ ನಿನಗೆ [1]ಮುನ್ನಮೇಱಲ್ ತರಿಸಿದೊ
ಸುಯೋಧನನೇವಯಿಸಿ ನಿನ್ನಂ ಪೋಗಲ್ವೇೞ್ದು—

ಉ॥ ಆನಿರೆ ನೀಮಿದೇಕೆ ದಯೆಗೆಯ್ದಿರೊ ಮೀಂಗುಲಿಗಂಗೆ ಪೇೞಿಮೆ
ದಾ ನರನಾಥನಂ ತಿಳಿಪೆ ತನ್ಮುನಿ ಭೂಭುಜನೆಯ್ದೆ ನಂಬಿ ಕಾ
ನೀನ ಸಮಂತು ಪಾಟಿಸುವೆನೊಯ್ಯನೆ ಮು[2]ಳ್ಳೊಳೆ
ಮುಳ್ಳನೆಂದು ತ
ನೀ ನಯದಿಂದೆ ಪೆರ್ಚೆ [3]ಪೊರೆದಟ್ಟಿಱೊಳಂದೊಡನುಂಡನಲ್ಲನೆ
॥೬೭

ಚಂ॥ ಎನೆಯೆನೆ ಬಾಷ್ಪವಾರಿ ಪುಳಕಂಬೆರಸೊರ್ಮೆಯೆ ಪೊಣ್ಮೆ ಮುನ್ನ
ನಿ
ವೆನಗಿದನೇಕೆ ಪೇ[4]ೞ್ದಿರೊ ನೆಗೞ್ತೆ ಪೊಗೞ್ತೆಯನಾಂಪಿನಂ
ಸುಯೊ
ಧನನೆನಗೊಳ್ಳಿಕೆಯ್ದ ಕೃತಮಂ ಪೆಱಗಿಕ್ಕಿ ನೆಗೞ್ತೆ ಮಾಸೆ ನ
ಣ್ಪಿನ ನೆವದಿಂದೆ ಪಾಂಡವರನಾನೊಳಪೊಕ್ಕೊಡೆ ನೀಮೆ
ಪೇ[5]ಸಿರೇ ॥೬೮

1 ಮದ (ಕ. ಖ. ಗ. ಘ.). 2 ಳ್ಳೊ (ಕ.). 3 ಸುತುಮು ಕ.)...ಕ
(ಖ.)...(ಗ. ಘ.). 4 ಸಿರೆ (ಕ.), ಳಿರೆ (ಖ.), ಳಿದಿರಿ (ಗ. ಘ.). 5 ಸ (ಕ.).

೦ ॥ ನೆತ್ತಪನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾ।
ಡುತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬ॥*
ಳ್ಕುತ್ತಿರೆಯೇವವಮಿಲ್ಲದಿವನಾ[1][ಯ್ವು]ದೊ ತಪ್ಪದೆ ಪೇಱಿಮೆಂಬ ಭೂ।
ಪೋತ್ತಮನಂ ಬಿಸುಟ್ಟೆರದೆ ನಿಮ್ಮೊಳಿ ಪೊಕ್ಕೊಡೆ ಬೇಡನಲ್ಲನೇ ॥ ೧೯ ॥

ವ॥ ಎಂಬುದುಂ ಕರ್ಣಂ ತನಗೆಂತುವೊಡಂಬಡದುದಂ ನಿರ್ಣಯ
ಾಗಱಿದು ಮಗುಟಲ್ವೇಟ್ಟು ನಾರಾಯಣಂ ಪೋದನಿತ್ತಲಂಗರಾಜನು
ಾತ್ಮಾಲಯಕ್ಕೆ ವಂದು ಚಿಂತಾಕ್ರಾಂತನಾಗಿ—

೦॥ ಕುರುಪತಿಗಿಲ್ಲ ದೈವಬಲವ್ಮಾಜಿಗೆ ಮೇಲ್ಮಲೆಗೆಯ್ವರಾಗಳುಂ।
ಗುರು ಗುರುಪುತ್ರ ಸಿಂಧುಸುತರಾಳ್ದನುಮೆನ್ನನೆ ನಚ್ಚಿ ಪೆರ್ಚಿಮುಂ॥
ಪೊರೆದನಿದಿರ್ಚಿ ಕಾದುವರುಮೆನ್ನಯ ಸೋದರರೆಂತು ನೋಡಿ ಕೊ।
ಕ್ಕರಿಸದೆ ಕೊಲ್ವೆನೆನ್ನೊಡಲನಾಂ ತವಿಪೆಂ ರಣರಂಗ ಭೂಮಿಯೊಳ್ ॥ ೨೦ ॥

॥ ಅಱಿದೆಂ ಸೋದರರೆಂದು ಪಾಂಡವರನಿನ್ನೆಂತೆ[2]ನ್ನರಂ ಕೊಲ್ವೆನ।
ಟ್ಟಿಜೊಳೆನ್ನಂ ಪೊರೆದೆಯ್ದೆ ನಂಬಿದ ನೃಪಂಗೆಂತಾಜಿಯೊಳ್ ತಪ್ಪುವೆಂ॥
[?]ತಱಿಸಂದುದ್ಧತ ವೈರಿ ಭೂಪ ಬಲದೊಡ್ಡ[3]ಳ್ಳಾಡೆ ಲೆಕ್ಕಕ್ಕೆ ತ।
ತ್ತಿಱಿದೆನ್ನಾಳ್ದನಿನಾನೆ ಮುಂಚೆ ನಿಱಿಪೆಂ ಕೆಯ್ಕೊಂಡು ಕಟ್ಟಾಯಮಂ ॥ ೨೧ ॥

1 ವು (ಸ.). 2 ಲ್ಲ (ಕ. ಖ.). 3 ಟ್ಟಾ (ಕ.).
* ಈ ಪಾದದಲ್ಲಿ, ಎಲ್ಲ ಪ್ರತಿಗಳಲ್ಲಿಯೂ 'ಮುತ್ತಿನ ಲಂಬಣಂ ಪಱಿಯೆ'
ಿದ್ದು ಛಂದೋಭಂಗವಾಗಿದೆ.

ವ॥ ಎಂದು ಮುಂತಪ್ಪ ಕಜ್ಜಮಂ ತನ್ನೊಳೆ ಬಗೆದವ
ವೀರ್ಯಂ ಸೂರ್ಯದಿನದಂದು ಮಂದಾಕಿನಿಯಂ ಮೀಯಲೆಂದು
ದುರ್ಯೋಧನ ನಟ್ಟಿದ ದೇವಸವಳದ ಪದಿನೆಂಟು ಕೋಟಿ ಪೊ
ನೊಟ್ಟಿ ಬೆಟ್ಟಾಗೆ ಪುಂಜಿಸಿ—

ಕಂ॥ ಸೋರ್ವ ವಸುಧಾರೆಯಂ ಕೆ।
ಯ್ಸಾರ್ವ ನಿಧಾನಮುಮನಿಱಿಸಿ ತನ್ನೀವಳವಿಂ॥
ಪಾರ್ವಂಗಮುಳಿಪಿ ಬೇಡಿದ
ಪಾರ್ವಂಗಂ ಪಿರಿದನಿತ್ತನಂಗಮಹೀಶಂ ।

ವ॥ ಅಂತು ಚಾಗಂಗೆಯ್ದು ಜಗನ್ಮಂಗಳ ಗಂಗಾವಾ
ನಿವಾರಿತ ಪರಾಕ್ರಮನಘಮರ್ಷಣ ಪೂರ್ವಕಂ ಮಿಂದು ಕನ
ದೊಳ್ ತೆಕ್ಕನೆ ತೀವಿದ ಕನಕ ಕಮಳಂಗಳಿಂದಾದಿತ್ಯತೇಜನ
ಗರ್ಘ್ಯಮೆತ್ತಿ ಸೂರ್ಯಜಂ ಸೂರ್ಯಮಂತ್ರಂಗಳನೋದಿ ನೀರ
ತ್ರಿಃಪ್ರದಕ್ಷಣಂ ಗೆಯ್ವಾಗಳ್—

ಕಂ॥ ಸಂಗತ ತರಂಗಯುತೆಯಂ।
ಮಂಗಳ ಲಕ್ಷಣೆಯನಂದು ಭೋಂಕನೆ ಕಂಡಂ॥
ಗಂಗಾಂಗನೆಯಂ ಕಾಣ್ಬವೊ।
ಲಂಗನೃಪಂ ಮುಂದೆ ನಿಂದ ಕೊಂತಿಯನಾಗಳ್ ।

ವ॥ ಅಂತು ಕಂಡು ಮನದೊಳಾದೆಱಕದಿಂ ಸಾಷ್ಟಾಂಗ
ಪೊಡೆವಟ್ಟ ನಿಜ ನಂದನನನಬ್ಕಱಿಂದಪ್ಪಿಕೊಂಡು ಪರಮಾ
ಚನಂಗಳಿಂ ಪರಸಿ—

ಕಂ॥ ತೊರೆದಕುಚ[1]ಯುಗಳವಂದಂ।
ಬಿರಿವಿಡೆ ಮೊಲೆವಾಲನಬ್ಕಱಿಂದಂ ಮೆಯ್ಯಂ॥
ಕುರಿಸೆ ಸುರಿವಶ್ರುಜಲಮು ।
ಬ್ಬರಿಸಿ ಪೊನಲ್ ಪೊನಲನಟ್ಟೆ ಜನ[2]ನುತೆಗಾಗಳ್ ।

1 ಕಳಶದಿಂ (ಕ. ಗ, ಘ.) 2 ನಿ ? (ಪ,).

ಆಗಳೆ ಮಗನಂ ಪೆತ್ತವೊ।
ಲಾಗಿ ಲತಾಲಲಿತೆ ನೊಸಲ ಕಣ್ಬೆತ್ತವೊಲಂ॥
ತಾಗಡೆ ರಾಗಕ್ಕಾಗರ।
ಮಾಗೆ ದಿನಾಧಿಪ ತನೂಜನೊಸೆದಿರ್ಪಿನೆಗಂ ॥ ೭೫ ॥

ವ॥ ಗಂಗಾದೇವಿಯುಂ ದಿವ್ಯಮೂರ್ತಿಯುಂ ಕೆಯ್ಕೊಂಡುಬಂದು–

ಕಂ॥ ಒಪ್ಪಿಸಿದೆಂ ಕೆಯ್ಯೆಡೆಯೆಂ।
ದಪ್ಪೈಸಿದ ನಿನ್ನ ಮಗನನೀಗಳೆ ನಿನಗೆಂ॥
ದಪ್ಪೈಸಿ ಗಂಗೆ ಪೋಪುದು।
ಮೊಪ್ಪುವ ನಿಜ ಬಿಂಬದೊಳಗಣಿಂದಂ ದಿನಪಂ ॥ ೭೬ ॥

ಪೊಱಮಟ್ಟು ಬರಲ್ ತನ್ನಡಿ।
ಗೆಱಗಿದ ನಿಜ ಸುತನನಪ್ಪುಕೆಯ್ಂ ಪರಸಿ ಮನಂ॥
ಮಱುಗಿ ರವಿ ನುಡಿದನೆನ್ನುಮ।
ನುಱಿದೆ ಮರುಳ್ಮಗನೆ ಹರಿಗೆ ಕವಚಮನಿತ್ತೈ ॥ ೭೭ ॥

ಕಂ॥ ನುಡಿಯೆನದಂ ನಿನ್ನಂಬಿಕೆ।
ಪಡೆ ಮಾತೇಂ ಕೊಂತಿ ಹರಿಯ ಮತದಿಂ ಕಾಯ॥
ಲ್ಕೊಡರಿಸಿ ಬಂದಳ್ ಸುತರಂ।
ಕುಡದಿರ್ ಪುರಿಗಣೆಯನೆನಿತು ಲಲ್ಲೈಸಿದೊಡಂ ॥ ೭೮ ॥

ಎಂದರವಿಂದ ಪ್ರಿಯ ಸಖ।
ನಂದಂಬರತಳಮನಡರ್ವುದುಂ ಕೆಯ್ಮುಗಿದಿಂ॥
ತೆಂದಂ ಕುಂತಿಯನಬ್ಬೇಂ।
ವಂದಿರ್ಪುದಪ್ಪೆನಗೆ ಸಯ್ಪು ಬರ್ಪಂತೀಗಳ್ ॥ ೭೯ ॥

ಚಲಮುಂ ಚಾಗಮುಮುಳವುಂ।
ಕಲಿತನಮುಂ ಕುಲಮುಮೀಗಳೆನ್ನಯ ಮೆಯ್ಯೊಳ್ ॥

ನೆಲಸಿದುವು ನಿಮ್ಮ ಕರು[1]ಣಾ ।
ಬಲದಿಂ ನೀವೆನ್ನನಿಂದು ಮಗನೆಂದುಪಜಾಂ ॥

ಪಡೆದರ್ ತಾಯುಂ ತಂದೆಯು ।
ಮೊಡಲಂ ಪ್ರಾಣಮುಮನವರವು ಕೆಯ್ಯೆಡೆಯಂ ॥
ಕುಡುವುದರಿದಾಯ್ತೆ ನೀಮೆನ ।
ಗೆಡೆ ಮಡಗದೆ ಬೆಸಪ ತೊಟ್ಟುವೆಸನಂ ಬೆಸಸಿಂ ॥

ಎಂಬುದುಮಂಬಿಕೆ ಮಗನೆ ಮ ।
ನಂಬೆಳಜಿದೆ ನೀನುಮಿತ್ತೆಯಾನುಂ ಪೆತ್ತೆಂ ॥
ನಂಬಿದ ನಿನ್ನನುಜ[2]ರ್ ನಿ ।
ನ್ನಂ ಬೆಸಕೆಯೆ ನೀನೆ ನೆಲನನಾಳ್ವುದು ಕಂದಾ ॥

ನಿನಗಪ್ಪರಸಂ ದುರ್ಯೋ ।
ಧನನೊಲವಂ ಮುಂದು[3]ಗೆಯ್ದು ಬೆಸಕೆಯ್ವರೆ ನಿ ॥
ನ್ನನುಜರಿರಲ್ಕಸೆಗಂ ಕಿಸು ।
ಜಾನಿಸಾಗದು ಮಗನೆ ನೀನೊಡಂಬಡವೇಳ್ಕುಂ ॥

ವ ॥ ಎಂಬುದುಮದೆಲ್ಲಮುಂ ಕೇಳ್ದು ಕರ್ಣಂ ಮುಗುಳ್ನಗೆ

ಮ ॥ ಭಯಮುಂ ಲೋಭಮುಮೆಂಬ ತಮ್ಮತಿರಪುಂ ಪಾಪಕ್ಕೆ

ಟಿಯನೊಕ್ಕಾಳ್ದನಗೆಯ್ದ ಸತ್ಕೃತಮುಮಂ ಪಿಂತಿಕ್ಕಿ ಜೀ

ಪ್ಪಿಯುಮಿಂ ಬಾಟ್ಪದೆ ಪೂಣ್ದು ನಿಲ್ಲ[4]ದಿಕೆಯಿಂ ಬಾ
ವಿಖ್ಯಾ
ತಿಯಪ್ರೋಲ್ದಿೀಯೊಡಲಬ್ಬೆ ಪೇಳ್ದಿಮೆನ[5]ಗೇಂ ಕಲ್ಪಾಂ
ಯಿಯೇ ॥

1 ಣದ (ಗ. ಘ.). 2 ರುಷುಂ | ಸಿಂ (ಖ.) ರುಸಿನ | ಗಿಂ (ಗ.). ರು
ಖಿಂ (ಘ.) 3 ವರಿದು (ಖ. ಘ.) 4 ಜಿ (ಖ. ಗ. ಘ.). 5 ಗಿಂ (ಖ.ಗ.

ಕಂ ॥ ವೀಂಗುಲಿಗನೆನಾಗಿಯುಮ್ಮಣ ।
ಮಾಂ ಗುಣಮನೆ ಬಿಸುಟೆನಿಲ್ಲ ನಿಮಗಂ ಮಗನಾ ॥
ದಂಗೆನಗೆ ಬಿಸುಡಲಕ್ಕುಮೆ ।
ನೀಂ ಗಳ ಪಂಬಲನೆ ಬಿಸುಡಿಮಿನ್ನೆನ್ನೆಡೆಯೊಳ್ ॥ ೮೫ ॥

ವ ॥ ಎಂಬುದುಂ ಕೊಂತಿ ಭೋಂಕನೆರ್ದೆದೆಱೆದು—

॥ ಅಱಿದೆಂ ನೆಟ್ಟನೆ ಬೆಟ್ಟನಿಂತು ನುಡಿವೈ ನೀಂ ಕಂದ ಪೋಗ್ಗಿಂದೆ ಕೆ।
ಟ್ಟೞಿದತ್ತಾಗದೆ ಸೋಮವಂಶಮೆನಗಿಂ, ಬಾೞ್ವಾಸೆಯೆಲ್ಲಿತ್ತೊ ಬಿ॥
ಟ್ಟೞಿದೆಂ ಮತ್ತಿನ ಮಕ್ಕಳಾಸೆಯುಮನಾನೆಂ[1][ದ]ಳ್ಗಿ ಶೋಕಾಗ್ನಿ
ಪೊಂ ।
ಪುೞಿವೋಗುತ್ತಿರೆ ಕರ್ಣನೆಂದನಿನಿತೇಂ ಪೇೞಬ್ಬೆ ಚಿಂತಾಂತರಂ
॥ ೮೬ ॥

ಕಂ ॥ ಪಿಡಿಯೆಂ ಪುರಿಗಣೆಯಂ ನರ ।
ನೆಡೆಗೊ[2]ಂಡೊಡಮುೞಿದ ನಿನ್ನ ಮಕ್ಕಳ್[3]ನಿನ್ನೇ ॥
ರ್ದೊಡಮುೞಿಯೆಂ ಪ್ರೆರ್ಜಸಮನೆ ।
ಪಿಡಿದೆನ್ನನೆ ರಣದೊಳೞಿವೆನಿರದಡಿಯೆ[4]ತ್ತಿಂ ॥ ೮೭ ॥

ವ ॥ ಎಂದು ಕೊಂತಿಯಂ ವಿಸರ್ಜಿಸಿ ಚಲದ ಚಾಗದ ಕುಲದ
...ಯನಾವರ್ಜಿಸಿ ರಾಧೇಯನೊಳ್ಪಿಂಗಾಧೇಯಮಾಗಿರ್ದನಿತ್ತ ಪುರು
...ೕತ್ತಮನುಂ ಕತಿಪಯ ಪ್ರಯಾಣಂಗಳಿಂ ವಿರಾಟಪುರ ನಿಕಟ
...ರ್ಯಪ್ಪ ದಿವಿಜಾಪಗಾತಟದುಪವನದೊಳರಿನೃಪವನಕ್ಕುಪದ್ರವಕಾರಿ
...ಾಗಿ ನೆಲಂ ಮೂರಿವಿಟ್ಟಂತೆ ಬಿಟ್ಟಿರ್ದಜಾತಶತ್ರುವನವನತೋತ್ತ
...ಂಗನಾಗಿ ಕಂಡು—

1 ದೇೞೆ (ಕ.), ದೆಳ್ಗಿ (ಖ. ಗ. ಘ.). 2 ದಡ (ಖ.), ಡದೊಳ (ಗ.),
...ೊಡ (ಘ). 3 ನೆನ್ನೊ (ಖ. ಘ.), ನೆನ್ನ (ಗ). 4 ತ್ತೆಂ (ಕ. ಗ.).

ಮ || ಓಮುಕ್ಕೃದ್ವಂಶಜರಪ್ಪ ಪಾಂಡುಸುತರಂ ಕೆಯ್ಕೊಂಡು ನಿನ

ಡಮನಿತ್ತುಂ ನಡಪೆಂದು ಸಾಮಮನೆ ಮುಂ ಮುಂತಿಟ್ಟೊ

ಕ್ರಮಮಂ ತೋಱಿ ಸಿಡಿಲ್ದು ಪಾಯ್ವುದುಮುಸುಂಗೊಳ್
ವಿಕ್ರ

ಪಮನಾಂ ತೋಱಿದೆನಿಂ ಕಡಂಗಿ ರಣದೊಳ್ ನೀಂ
ನಿನ್ನಾರ್ಪುಮಂ ||

ವ|| ಎಂಬನ್ನೆಗಂ ದುರ್ಯೋಧನನಟ್ಟಿದ ದೂತಂ ಸಂಜಯ
ಬಂದು ಸಕಲ ಸಾಮಂತ ಮಣಿ ಮಕುಟ ಮರೀಚಿ ವ
ಚರಣಾರವಿಂದನಪ್ಪ ಧರ್ಮ ನಂದನನಂ ಕಂಡು—

ಉ || ಅಟ್ಟಿದ ನಿಮ್ಮ ಪೆರ್ಗಡೆ ಬರ್ದುಂಕಿದನೆಂಬುದನಿಂದ್ರಜಾಲ
ತೊಟ್ಟನೆ ತೋಱಿ ಬಂದು ಬರ್ದುಕಾಡಿದನಿನ್ನಳಿಪಿಂದಪ
ಟ್ಟಟ್ಟಿಗಳಂ ಬಿಸುಟ್ಪುದೆಮಗಂ ತಮಗಂ ಮುಳಿಸಿಂದ[1]ಮಿ
ಟ್ಟಟ್ಟಿಗಳಪ್ಪುವೆಂದಿದನೆ ವಲ್ ನುಡಿವಟ್ಟಿದನೆಮ್ಮ ಭೂಭು

ಮ || ಬಳ ಸಂಪನ್ನರನಾಸೆಗೆಯ್ಗೆ ಚತುರಂಗಾನೀಕಮಂ ಕೂಡ
ಳ್ಗಳಮಂ ಗಂಡುಮನಪ್ಪುಕೆಯ್ಗೆ ಮನಮಂಬಲ್ಲಿತ್ತು
ದ

ನೆಳೆಯಂ ಕಾದಿದೊಡಲ್ಲದೀಯೆನಱಿದಿರ್ಕೆಂದಾ ಕುರುಕ್ಷೇ
ಕೆಳವೇಟ್ಟಿಟ್ಟಿದನಣ್ಮಿ ಸಾಯಮುಳಿಯಿಂ ನಿಮ್ಮೊಂದು
ಸೆಯಂ

ವ|| ಎಂಬುದುಂ ವೃಕೋದರಂ ಮುಳಿದಾಸ್ಫೋಟಿಸಿ—

---

1 ಬಂದಮ (ಖ.), ವಿ ಗಮ (ಗ.), ಪ್ಪೆದೆಮ (ಘ.).

ವಿಸಸನ ರಂಗಮಪ್ಪುದೆನಗಂ ತನಗಂ ದೊರೆ ಕಾಯ್ಪುವೇವಮುಂ।
ಪಸರಿಸಿ ಪರ್ವಿ ತನ್ನೊಳಮದೆನ್ನೊಳಮಿರ್ದುದು ಭೀಮನೆಂದೊಡಾ॥
ಪೆಸರನೆ ಕೇಳ್ದು ಸೈರಿಸದ ನಿನ್ನರಸಂ ಕಲಿಯಾಗಿ ನಾಳೆ ಸೈ।
ರಿಸುಗುಮೆ ವೈರಿಭೂಪ ರುಧಿರಾರ್ದ್ರ ಮದೀಯ ಗದಾಭಿಘಾತಮಂ
॥ ೯೧ ॥

ವ॥ ಎಂಬುದುಂ ಪರಾಕ್ರಮಧವಳನಿಂತೆಂದಂ—

ಕಱುಪುಂ ಕಾಯ್ಪುಮನುಂಟುಮಾಡಿ ನೆಲನಂ ದುರ್ಯೋಧನಂ
ತಾಗಿ ತ।
ಳ್ತಿಱಿದಂದಲ್ಲದೆ ಕೂಡನಾಜಿ ಭರಮುಂ ಸಾರ್ಚಿತ್ತದೇನೆಂದು ಮು॥
ನ್ನಱಿದಿಂಗಳ್ ಜಱುಚುತ್ತುಮಿರ್ಪುದೆ ರಣಕ್ಕಾರೆನ್ನ ರೆಂದೀಗ[1]ಳಿಂ।
ತಱಿಯಲ್ ಬರ್ಕುಮೆ ಬರ್ಕೆ ಬಂದೊಡಱಿಯಲ್ಕಕ್ಕುಂ ಕುರು
ಕ್ಷೇತ್ರದೊಳ್ ॥ ೯೨ ॥

ವ॥ ಎಂಬುದುಂ ಯಮನಂದನನಿಂತೆಂದಂ—

ಸ್ರ॥ ಎಳೆಯಂ ದುರ್ಯೋಧನಂ ತಳ್ತಿಱಿಯದೆ ಕುಡೆನೆಂದಟ್ಟಿ ಕಾದಲ್ಕ
ಮೀಗಳ್ ।
ಕಳನಂ ಪೇೞ್ದಂ ಕುರುಕ್ಷೇತ್ರಮನೆನೆ ತಡವಿನ್ನಾವುದುಗ್ರಾಜಿಯೊಳ್
ದೋ॥
ರ್ವಳದಿಂದಂ ತನ್ನ ಮೆಚ್ಚಂ ಸಲಿಸಿಯೆ ನೆಲನಂ ಕೊ[2]ಳ್ವನಿಂ
ತಳ್ವನೆನ್ಮೊಳ್ ।
[3]ಕಳ[ನ]ಂ ಬೇಡೆಯ್ದೆ ಕೇಳ್ದಂ ಬಗೆಯನಱಿಯಲಾಯ್ತೀಱಿಂ
ಮಂತೆಂದೆ ಪೇೞ್ ॥ ೯೩ ॥

---

1 ಳಿಂ। ನ (ಕ.). 2 ಳ್ವನತ್ತೊರ್ವನೆ (ಕ. ಖ.), ಳ್ವನಂ ತೊಳ್ವನ (ಗ.), ತ್ರಳ್ವನ (ಘ.). 3 ಕಳಱಿಂ (ಕ.), ಕಳರಂ (ಖ. ಘ.), ಪಳರಂ (ಗ.).

ವ॥ ಎಂದಜಾತಶತ್ರು ಶತ್ರುಪಕ್ಷ ಕ್ಷಯಂ ಮಾ[1]ಡುವುದ್ಯೋ
ತ್ತಿಕೊಂಡು ಪ್ರಯಾಣ ಭೇರಿಯಂ ಪೊಯ್ಸಿದಾಗಳ್—

ಮ ॥ ದೆಸೆಯಂ ಪೊತ್ತು ಮದೇಭ ರಾಜಿ ದೆಸೆಗೆಟ್ಟೋಡಲ್ಕೆಗುಳ್ದತ್ತು
ಪ್ತ ಸಮುದ್ರಂ ಕರೆಗಣ್ಮಿ ತನ್ನವಧಿಯಂ ದಾಂಟಿತ್ತು ಜಾಂಡ
ಲ್ದು ಸಿಡಿಲ್ಪೊಯ್ದೊಡೆದೊಂದುತತ್ತಿಯವೊಲಾಯ್ತೆಂಬೊಂ
ಸಂದೆ
ಪೊಸತಂ ಭೂ ಭುವನಕ್ಕೆ ಮಾಡಿದುದು ತತ್ಸನ್ನಾಹ ಭೇರಿ
॥

ಕರಿಗಳ್ ಭೃಂಗ ಕುಳಾಕುಳೀಕೃತ ಕಟೋಪೇತಂಗಳೊ

ಸಿರಮಂತೊಂದು ಗಜಕ್ಕೆ ನೂಱು ರಥಮಂತಾಸ್ಯಂದನ
ಱ

ತುರಗಂ ನೂಱನಿತುಂ ತುರಂಗ ದಳವೊಂದೊಂದರ್ಕೆ ನೂ

ಳ್ದಿರೆ ಬಲ್ಲರ್ ನಡೆ ನೋಡಿ ಕೂಡೆ ಪಡೆದತ್ತಕ್ಷೋಹಿಣೀ ಸಂ
॥

ವ॥ ಅಂತು ಮಾಡಿದ ಪರಿಸಂಖ್ಯೆಯೊಳೊಂದಕ್ಷೋಹಿಣೀ
ರಸು ತಲೆ ಬಱಿವಱಿಯೆಂದಭಿಮನ್ಯುಗೆ ಕೂಸಂ ಕೊಟ್ಟ
ವಿರಾಟಂ ಶ್ವೇತನುತ್ತರಂ ಶಂಖನೆಂಬ ಮೂವರ್ ಮಕ್ಕಳುಂ ಶ
ಶತದ್ಯುಮ್ನ ಶತಚಂದ್ರಂ ಮೊದಲಾಗಿ ಪ[2]ನ್ನೊರ್ವರ್ ತಮ್ಮಂ
ರಸು ನೆಲನದಿರೆ ಮುಂಗೋಳೊಳ್ ನಡೆಯೆ ದ್ರೌಪದಿ[3]ಯ
ನಣ್ಪುಮಂ ದ್ರೋಣನೊಳಾದ ಪರಿಭವಮುಮಂ ನೆನೆದೊಂದಕ್ಷೋ
ಬಲಂಬೆರಸು ದ್ರುಪದಂ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ
ಮನ್ಯೂತ್ತ[4]ಮೌಜಃ ಪುರುಕುತ್ಸು ವಿಚಿತ್ರಾದಿಗಳಪ್ಪ ತನ್ನ ಮಕ್ಕ

1 ಡಲು (ಕ.) 2 ಸ್ನಿ (ಕ.). 3 ಯಂ (ಕ.). 4 ಮೋ (ಕ. ಖ

ನೆಲಂ ಮೂರಿವಿಟ್ಟಂತೆ ಬಲವಕ್ಕದೊಳ್ ನಡೆಯೆ ಸುಭದ್ರೆ[1]ಯಕೊಟ್ಟ ನಣ್ಪಿಂಗನುಬಲಮಾಗಿ ಪುಂಡರೀಕಾಕ್ಷನ ತಮ್ಮಂ ಸಾತ್ಯಕಿ ವೃಷ್ಣಿ ಕಾಂಭೋಜ ಕುಳತಿಳಕರಪ್ಪ ಯಾದವರ ಕುಲದೊಡನೆಯಕ್ಷೋಹಿಣೀ ಪತಿ ನಾಯಕಂ ಭೂಪತಿಯೆಡ[2]ವಕ್ಕದೊಳ್ ನಡೆಯೆ ಕೇಕಯ ವಿಷಯಾ ಧೀಶ್ವರರಪ್ಪ ಕೈ[3][ಕ]ಯರಯ್ವರುಮೊಂದಕ್ಷೋಹಿಣೀ ಬಲದೊಡನೆ ಸಿಡಿಲ ಮುರುಳಿಮಾಡಿದಂತು ಪಿಂಗೋಳೊಳ್ ನಡೆಯೆ ಪಾಂಡ್ಯಂ ಶ್ರೀಜಯ ಸೋಮಕರೊಡನೊಂದಕ್ಷೋಹಿಣೀ ಬಲಂಬೆರಸು ಸುತ್ತಿ[4]ಱಿದು ಬಳಸಿ ಬರೆ ಧರಣೀಂದ್ರನ ತಂಗೆಯಪ್ಪ [5]ಕನಕಲತೆಗಂ ವಿಕ್ರಮಾರ್ಜುನಂಗಂ ಪುಟ್ಟಿದ ಮಗನಿಳಾವಂತನನಂತ ನಾಗರಾಜ ಬಲಂಬೆರಸು ನಾಗಲೋಕಮೆ ಕಿೞ್ತಿಟ್ಟು ಬರ್ಪಂತೆ ಬರೆ ಹಿಡಿಂಬೆಗಂ ಭೀಮಂಗಂ ಪುಟ್ಟಿದ ಮಗಂ ಘಟೋತ್ಕಚನಱುವತ್ತೆಂಟು ಕೋಟಿ ರಾಕ್ಷಸ ಬಲಂಬೆರಸು ಬರೆ ಸಾಮಂತ ಚೂಡಾಮಣಿಯ ಕೃತೋಪಕಾರಮಂ ನೆನೆದಂಗದ ಪರ್ಣನೆಂಬ ಗಂಧರ್ವಂ ನಾಲ್ಕು ಕೋಟಿ ಗಂಧರ್ವ ಬಲಮುಮಱುವತ್ತು ಸಾಸಿರ ಗಿಳಿಯ ಬಣ್ಣದ ಕುದುರೆಗಳುಂಬೆರಸು ಗಂಧರ್ವಲೋಕಮೆ ಕಿೞ್ತಿಟ್ಟು ಬರ್ಪಂತೆ ಬರೆ ಮಹಾ ಪ್ರಚಂಡರುಂ ಪ್ರತಾಪಿಗಳುಮಪ್ಪ *ಪಂಚ ಪಾಂಡವರುಮಂಕದಭಿಮನ್ಯುವುಂ ಕೆಲ ಕೆಲದೊಳೋಲಗಿಸುತ್ತುಂ ಬರೆ ಕೊಂತಿಯ ಮಾವನಪ್ಪ ಕೊಂತಿಭೋಜನುಂ ಸೋಮಕಂ ಬೆರಸೊಂದಕ್ಷೋಹಿಣೀ ಬಲಂಬೆರಸು ಬರೆ ಮತ್ತಂ ಪ್ರಭ[6]ದ್ರೈಕಬ ಲಮುಮಂಗ ವಂಗ ಕಳಿಂಗ ಕೊಂಗ ಕೊಂಕಣ ಗೊಲ್ಲ ಕಾಂಭೋಜ ಮಗಧ ಸೌರಾಷ್ಟ್ರ ವರಾಟ ಲಾಟ ಕರ್ಣಾಟ ಕರಹಾಟ ಮಳಯ ಸಾಳವ ನೇಪಾಳ [7]ಪಾರಿವ ಪಾರಿಯಾತ್ರ ಬರ್ಬರ ಕೋಸಳ ಕಾಶಿ ಕಾಶ್ಮೀರ ಕೌಶಿಕಾಂಧ್ರ ದ್ರವಿಳ ಗಜಮುಖಾಶ್ವಮುಖೋಷ್ಟ್ರಮುಖ ಖರಮುಖ ಮೇಷಮುಖಲಂಬಕರ್ಣ ಹಸ್ತಿಕರ್ಣಾಶ್ವಕರ್ಣ ತುರುಷ್ಕ ಪ್ರವರ ನಾನಾದ್ವೀಪ ದೇಶಾಧೀಶ್ವರರುಂ ಪಗೆಗಂ ಪಾೞಿಗಂ ಪರಿಭವಕ್ಕಂ

1 ಯಂ (ಕ.). 2 ವಂ (ಕ) 3 ಕೇ (ಸ). 4 ಡಿ (ಕ. ಖ.). 5 ಮದನ ಲತೆ [v. ೧೫ವ.]. 6 ದ್ರೆ (ಖ. ಗ. ಘ.). 7 ಪಾರ (ಸೀಕ) ಬರ್ಬರ (ಕ.), ಪಾರಿ ಬರ್ಬರ (ಖ.ಗ.).

* ಪ್ರುತ ಸೋಮಕಾದಿ ಉಪಪಾಂಡವರು.

ಪಟಿವೆಗಂ ಪಾಗುಡಕ್ಕಂ ಪಳಬದ್ಧಕ್ಕಂ ವೈವಾಹಿಕ ಸಂಬಂಧಕ್ಕಂ
ಕ್ಕಂ ಮೇರೆಗಂ ಅಟ್ಟಟ್ಟಿಗಂ ಸ್ವಾಮಿ ಭೃತ್ಯ ಸಂಬಂಧಕ್ಕಂ ದೋವ
ವೈಮೆಗಂ ಮೋಕ್ಷಕ್ಕಂ ಮಹಾ ಸಮುದ್ರದೊಳ್ ಮಹಾ
ಕೂಡುವಂತೇಟಕ್ಷೋಹಿಣೀ ಬಲಂ ಕೂಡಿ ನಡೆಯೆ ತನ್ನ
ತಮ್ಮಂದಿರೊಡನೆ ಮಂಗಳವಸವನಂಗೊಂಡು ಮಂಗಳ ಪ್ರಧಾ
ವಿಜಯ ಗಜಮನೇಱಿ ವಿದ್ಯೋತಮಾಗಿ ದಕ್ಷಿಣಾವ
ಹೋಮಾಗ್ನಿಯುಂ ಬಲಂಗೊಂಡು ಬಲದ ಕೋಡ ಮೇಲೆ ಕೆಯ್ಯ
ಮುಖವಿಕ್ಷೇಪಣಂಗೆಯ್ದು ಘನಾಘನ ನಿನಾದದಿಂ ಬೃಂಹಿ
ವಿಜಯಗಜಮುಂ ನೆಲನಂ ಪೊಕ್ಕಡಂಗಿದ ಪಗೆವರನಗುಟ್ದು ಕೊ
ದಾಹರಿಸುವಂತೆ ದಕ್ಷಿಣ ಚರಣದೊಳ್ ನೆಲನಂ [1]ಪರಡಿ ಗಂಭೀರ
ದಿಂ ಹೇಷಿತಂಗೆಯ್ದು ವಿಜಯಹಯಮುಂ ವಿಜಯನ ವಿಜ
ಸೂಚಿಸೆ—

ಮಂ॥ ಎಸಗಿತ್ತಂದನುಕೂಲ ಮಂದ ಪವನಂ, ಪೆಣ್ದುಂಬಿಗಳ್

ಮುಸುಱುತ್ತುಂ ಬರೆ ಬಂದುದಿಂದ್ರವನದಿಂ ಪೂವಂದಲ

ರ್ಜಿಸುವಂತಾದುದು ದೇವ ದುಂದುಭಿ ಜಯ ಪ್ರಾರಂಭ
ಸಾ

ತೆಸೆದತ್ತಚ್ಚರಿಯಪ್ಪಿನಂ ಜಯ ಜಯ ಧ್ವಾನಂ ದಿಗಂತಂ

ವ ॥ ಆ ಪ್ರಸ್ತಾವದೊಳ್—

ಶಾ॥ ವಾ[2][ತ್ಯಾ] ದುರ್ಧರ ಗಂಧ ಸಿಂಧುರ [3]ಕಟ ಸ್ರೋತಸ್ಸವ

ವ್ರಾತೇಂದಿಂದಿರ ಚಂಡ ತಾಂಡವ ಕಲ ಸ್ವಾಭಾವಿಕ ಶ್ರೀ

1 ಪುದುಡಿಸುವ (ಕ. ಗ.), ಪುದುಡಿ (ಖ.), 2 ತಾ (ಸ.). 3 ಘಟಾ
ಘಟೋ (ಖ.), ಘಟ (ಗ.). 4 ನ್ಮುಖ (ಕ. ಖ), ನ್ಮಹ (ಗ.).

ಕಿಂಚಾಕಸ್ಮಿಕ ಪಾಂಸು ಪಲ್ಲವ ಜಳಸ್ಯಂದೀ ಸದಾ ಸಿಂಧುರ ।
ಪ್ರಾ[1]ಗೇಯಂ ಪ್ರಿಯಗಳ್ಳ ಭೂಪತಿ ಚಮೂ ಪ್ರಸ್ಥಾನಮಾಚಕ್ಷತೇ
|| ೯೭ ||

|| ಎಂಬ ಮಂಗಳ ಪಾಠಕರ ಮಂಗಳ ವೃತ್ತೋಚ್ಚಾರಣೆಗಳಿಸೆಯೆ
ರ್ಮಪುತ್ರಂ ಕುರುಕ್ಷೇತ್ರಾಭಿಮುಖನಾದಾಗಳ್—

ಂ || ಧ್ವಜಮಯಮಂಬರಂ ಗಜಮಯಂ ಭುವನಂ ಪ್ರಳಯ ಪ್ರಚಂಡ
ಭೂ ।
ಭುಜಮಯಮಷ್ಟದಿಗ್ವಳಯಮಶ್ವಮಯಂ ಜಗತೀ ತಳಂ ರಥ ||
ವ್ರಜಮಯಮುಂ ಪದಾತಿಮಯಮುಂ ನೆಱೆಯಾದುದು[2]ಕಾಡು
ಕೋಡು [3]ಮಾರ್ ।
ತ್ರಿಜಗದೊಳಾಂಪರೀ ಬಲಮನಿನ್ನೆನಿಸಿತ್ತು ಚತುರ್ಬಲಾರ್ಣವಂ
|| ೯೮ ||

ಎಣಿಕೆಗಳುಂಬಮುಂ ಪಿರಿದುಮಾದ ಪದಾತಿ ವರೂಥ ವಾಜಿ ವಾ
ರಣ ಬಲದಿಂದಮಿರ್ಮಡಿಸೆ ಧಾತ್ರಿಯ ಬಿಣ್ಪೆನಗೆಂದಿನಂದವ ||
ಲ್ತಣಕಮಿದೆಂದು ಕಣ್ ತುಮುಟೆ ಪೆರ್ಬಡೆಯಿಂ ಮಣಿ ಸೂಸೆ
ಬೇಸಱಿಂ ।
ತಿಣುಕಿದನಾನಲುಮ್ಮಳಿಸಿ ಶೇಷನಶೇಷ ಮಹೀ ವಿಭಾಗಮಂ ||೯೯||

ಎ || ಏಱಿದ ಪೊನ್ನ ಪ[4]ಣ್ಣುಗೆಯ ಪೆರ್ವಿಡಿ ಕಟ್ಟಿದಿರಾಗೆ ಮುಂದೆ ಬಂ ।
ದೇಱಿದ ಚೆನ್ನಗನ್ನಡಿಯ ಚೇಟಿಕೆ ಬೀಸುವ ಕುಂಚಮೆಯ್ದೆ ಮೆ ||
ಯ್ದೋಱುವ ಗಾಡಿ ಕಾಂಚನದ ದಂಡದ ಸೀಗುರಿ
ನೋಟಿಪ್ಪಡಾರುಮಂ ।
ಮಾಱೆ ಮನೋಜನೊಡ್ಡೆನಿಸಿದರ್ ನಡೆತಂದ ನರೇಂದ್ರ ಕಾಂತೆ
ಯರ್ || ೧೦೦ ||

---

1 ಲೇ (ಘ). 2 ತಾಡು ತೋಡು (ಕ.), ಕಾಡತೋಡು (ಗ.). 3 ಮೀ
ಖ. ಗ. ಘ.). 4 ಣ್ಣೆ (ಕ.).

ಕಂ || ಅಂತು ತಿರುವಿಂ ಬರ್ದುಂಕಿದ ।
ಕಂತುವನಸೆಗಣೆಗಳಂತೆವೋಲ್ ನಡೆತಂದರ್ ||
ಸಂತಸದೆ ಪೊನ್ನ ಕಳಸದ ।
ದಂತದ ಸಿವಿಗೆಗಳನೇಱಿ ಭೋಗಿಯರರೆಬರ್ || ೧

ಹರಿಣೀಪ್ಲುತಂ || ನಡೆಯೆ ತುರಗಂ ಪೊನ್ನಾಯೋಗಂಗಳಿಂದಮದೆ

ಪಡೆಯೆ ನೆಱಲಂ ಚಂಚತ್ಸಿಂಛಾತಪತ್ರಮ [1][ಕೊ]ಡೆ ತ ||
ವ್ಮೊಡನೆ ಬರೆ ಬಂದೆತ್ತಂ ಪತ್ತೆಂಟು ದೇ[2]ಸೆ ವಿಳಾಸಮೊಳ್
ತೊಡರೆ ಚಱತಂಬಂದರ್ ಕಣ್ಗೊಪ್ಪಿರಲ್ ವರ ಭೋಗಿಯರ
|| ೧

ಚಂ || ಸಡಹುಡನಪ್ಪ ಕಟ್ಟಿ [3]ಕೊಡೆ ಸಂತಸದಿಂ ಪೆಜಗೇಱಿ ಬಪ
ನ್ನಡಿವಿಡಿದಾಕೆ ಚಿನ್ನದ ಸವಂಗಮಪೂರ್ವದ ಪೊಚ್ಚೆಯಂ
ಣ್ಬಡೆದ ಸುವರ್ಣ ಪಾರಿವದ ಕುಪ್ಪಸಮೊಪ್ಪೆ ಬೆಡಂಗನಾಳ್
ಣ್ಗೆಡಱಿವೆ ಪೆಂಡವಾಸದ ವಿಳಾಸದ ಸೂಳೆಯರೊಪ್ಪಿ ತೋಱ
|| ೧

ಮ || ನಡೆಯಲ್ಬಂದಿಱಿಯಲ್ಕೆ ತಕ್ಕ ತುರಂಗಂ ಭೋರೆಂದು ಬರ್ಪೊ

ಬಡು ಬಂದೆತ್ತಿಸಿದೊಂದು ಸತ್ತಿಗೆ ಕರಂ ಮೆಯ್ವೆತ್ತ [4][ಮು]
ಯ್ವಾಗ
ಗಡುಮಾರ್ಗಂ ಕುಡುತಿರ್ಪ ಕಪ್ಪುರದ ಬಂಬಲ್ದಂಬುಲಂ

ಪಡೆಗೆಲ್ಲಂ ಪಡೆವನ್ನೆಗಂ ನಡೆದರಂದೆತ್ತಂ ಕೆಲರ್ ನಾಯಕರ್
|| ೧

1 . . . (ಕ.), ವಾ (ಬ. ಗ. ಘ.). 2 ಶಿ (ಕ.). 3 ಕಡೆ (ಗ.), ಕುಡೆ
4 ಮೆ (ಸ.).

ವ || ಮತ್ತಂ ಸಸಂಭ್ರಮ ಪ್ರಚಳಿತ ಸಮದ ಗಜ ಘಟಾ ಘಂಟಾ
ವಂಗಳಿಂದಂ ತುರಂಗಮ ಹೇಷಿತಂಗಳಿಂದಂ ಮಹಾ ಸಾಮಂತರ ಪ[1]ದಿರ
ಪ]ಜಿ[3]ಗಳಿಂದಮುಗುರ್ವಾಗೆ ನಡೆವ ಬೀಡಿಂಗೆ ಬೀಡುವಿಡಲ್, ನೆಲನು
ೂಲೆಗಲ್ಲಳ್ಗೆ ಬೆಟ್ಟುಗಳುಂ ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ ದಂಡಿ
ಗೆ ವೇಣು ವನಂಗಳುಮಾನೆಗಂಬಕ್ಕೆ ಪೆರ್ಮರಂಗಳುಮಾ ಪಡೆಗೆ
ಜಿ[3]ಯವೆನಿಸಿ ಪಾಂಡವರೇಟಕ್ಷೋಹಿಣೀ ಬಲಂಬೆರಸೇೞುಂ ಸಮುದ್ರಂ
ಳುಂ ಮೇರೆದಪ್ಪಿ ಬರ್ಪಂತಿರೆ ಬಂದು ಕಡಿತ ಮಿಕ್ಕಿದಂತಿರ್ದ ಸಮ
ತುರಶ್ರಂ ನಾಲ್ವತ್ತೆಣ್ಗಾವು[2]ದು ಪರಿ ಪ್ರಮಾಣಮೆನಿಪ ಕುರುಕ್ಷೇತ್ರಮ
ಯ್ದೆವಂದದಱ ಪಶ್ಚಿಮ ದಿಶಾ ಭಾಗದೊಳ್ ಮುನ್ನೆ ಪರಶುರಾಮ
ಲೋಕದೊಳುಳ್ಳರಸು, ಮಕ್ಕಳಿಲ್ಲರುಮನಿರ್ಪತ್ತೊಂದು ಸೂೞ್ವರಂ
ಟಿ[3] ಪೆಸರಿಲ್ಲದಂತೆ ಕೊಂದು ತಂದೆಯ ಪಗೆಗೆಂದಲ್ಲಿಯೆ ತಂದು ನಿಜ
ಶಿತ ಪರಶು ಧಾರೆಗಳಿಂ ನೆತ್ತರ್ ಸೂಸಿ ಪಾಯೆ ಕಡಿದವರ ನೆತ್ತರ ಧಾರೆ
ೂಳ್ ತೀವಿ ತನ್ನ ತಾಯಂ ನೀರಿೞಿಪಲುಂ ತಾನುಂ ಮಿಂದು ತನ್ನ
ಂದೆಗೆ ನೀರ್ಗುಡಲುಮೆಂದು ಮಾಡಿದ ಶಮಂತ ಪಂಚಕಂಗಳೆಂಬಯ್ದು
ರ್ಮಡುಗಳ ಕೆಲದೊಳೆಡೆಯಱಿದು ಬೀಡಂ ಬಿಡಿಸಿ—

|| ವೀರ ಕ್ಷೇತ್ರಮ[3]ಗುರ್ವಿಗಂಕದ ಕುರುಕ್ಷೇತ್ರಂ ಬಲ[4]ಸ್ಥರ್ ಮಹಾ |
ಕ್ರೂರಾರಾತಿಗಳೆನ್ನ ದೋರ್ವಲದಗುರ್ವಿಂದಂ ತ್ರಿಲೋಕಕ್ಕೆ ಸಂ||
ಹಾರಂ ಮಾಡಿದ ಭೈರವ ಪ್ರಭುವಿನೊಂದಾಕಾರದಿಂ ವೈರಿ ಸಂ |
ಹಾರಂ ಮಾಡವೆ ಮಾಣೆನೆಂದು ಹರಿಗಂ ಕೆಯ್ಕೊಂಡನುತ್ಸಾಹಮಂ
|| ೧೦೫ ||

ಇದು ವಿವಿಧ ವಿಬುಧ ಜನ ವಿನುತ ಜಿನ ಪದಾಂಭೋಜ ವರ ಪ್ರಸಾದೋತ್ಪನ್ನ
ಪ್ರಸನ್ನ ಗಂಭೀರ ವಚನ ರಚನ ಚತುರ ಕವಿತಾ ಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ನವಮಾಶ್ವಾಸಂ

———

1 ಡಿಯಜಿವ (ಕ. ಖ.), ದಿರವ (ಗ. ಘ.). 2 ದ (ಕ. ಖ, ದಂ (ಘ.).
ಬ (ಕ.). 4 ಸಂ (ಖ. ಗ. ಘ.).

# ದಶಮಾಶ್ವಾಸಂ

ಕಂ ॥ ಶ್ರೀ ನಾರೀ ವಲ್ಲಭನಭಿ।
ಮಾನಧನಂ ಹರಿಗನಾ ಕುರುಕ್ಷೇತ್ರದೊಳಂ ॥
ತೇನುಂ [1]ಮಾಣದೆ ಬಿಟ್ಟುದ ।
ನಾ ನೆಗಟ್ದ ಸುಯೋಧನಂಗೆ ಚರರಱಿಪುವುದುಂ ॥

ಗುರು ಗುರುಸುತ ಶಕುನಿ ಕೃಪಾಂ ।
ಗ ರಾಜರಂ ಬರಿಸಿ ನುಡಿದನವನಿಪನೇಂ ಕೇ ॥
ಳ್ದಿರೆ ಪಾಂಡುಸುತರ ಮುನಿಸಿನ ।
ತಱಿಸಲವಿನ ಚಲದ ಬಲದ ಕಲಿತನದಳವಂ ॥

ಬಂದು ಕುರುಕ್ಷೇತ್ರದೊಳಳ ।
ವೊಂದಿರೆ ನಮ್ಮೊಳ್ ಕಡಂಗಿ ಮಿಗೆ ತಳ್ತಿಱಿಯ ॥
ಲ್ಕೆಂದಾನುಂ ಬಂದಿರ್ದರಿ ।
ದೇಂ ದಾಯಿಗತನಮನೆಮಗವರ್ ತೋಱಿದಪರ್ ॥

ಮ ॥ ಪಡೆವಳ್ಳಂ ಗಡಮಾ ಬಲಕ್ಕೆ [2]ದಲೆ ಧೃಷ್ಟದ್ಯುಮ್ನನೆಂಬೊಳ್ಳಿ
ಪಡೆಯೊಳ್ ಗಂಡನುಮಾ ಮೊಲಂ ದ್ರುಪದನುಂ [3]ಪೇರೊಟ್ಟಿ
ಮತ್ಸ್ಯ
ಗಡಮಂತಾ ಬಲಕಾಳ್ದನೇನಱಿಯಿರೇ ಧರ್ಮಜ್ಞನಾ ಧರ್ಮ
ಗಡಮೇಂ ನಾಯಕರೊಳ್ಳಿದರ್ ನೆರೆದರೋ ಕಾದಲ್ಕೆಮತ್ಸೈ
ದೊಳ್॥

ವ ॥ ಎಂಬುದುಂ ಕುಂಭಸಂಭವನಿಂತೆಂದಂ—

ಮ ॥ ಕಳವೇಟ್ದ್ರಿ ಕುರುಭೂಮಿಯಂ ಕಳಕವರ್ ವಂದಿರ್ದರೆಂದ
ದೆ
ರ್ವಳ ಚಾತುರ್ವಳ ತತ್ಸುಹೃದ್ಬಳಮನಿನ್ನೇಗೇಳ್ದಪೈ ಪಾಂಡ

1 ಬಗೆಯದೆ (ಘ .). 2 ರ (ಕ. ಖ. ಗ). 3 ಪೆಣ್ಗೊ (ಖ.), ಪೆಣ್ಗೊ

ಬಳ ಸಂಪನ್ನರುದಗ್ರ ದೈವಬಳ ಸಂಪನ್ನರ್ ಮುರುಳ್ಮಾ[1]ತನಿ ।
ನ್ನುೞಿ ಗಾಂಗೇಯರ ಪೇಳ್ದುದೊಂದು ತೆಱದಿಂ ನೀಂ ಕಾದು
ದುರ್ಯೋಧನಾ ॥ ೫ ॥

ವ॥ ಎಂಬುದುಮಾ ಮಾತಂ ಮನದೇಗೊಂಡಂತೆಗೆಯ್ವೆನೆಂದನಿ ...ಮಮಂ ವಿಸರ್ಜಿಸಿ ನಿಶಾಸಮಯದೊಳ್ ಪತ್ತೆಂಟು ಕೆಯ್ದೀವಿಗೆಗಳ ...ಗಿನೊ[2]ಳಂ ಕತಿಪಯ ಪರಿಜನ ಪರಿವೃತನಾಗಿ ರಾಜರಾಜಂ ಸಿಂಧು ...ರಮನೆಗೆವಂದು ವಾಹನದಿಂದಮಿೞಿದು ಕುರುಪಿತಾಮಹಂಗೆಱಗಿ ...ಡೆವಡುವುದುಂ ಪರಸಿ ಮಂಚದೊಳೇಱಲ್ ಕರೆದೊಡೊಲ್ಲೆಂ ...ಹಾ ಪ್ರಸಾದಮಿಂತಿರ್ಪೆನೆಂದು ಮಣಿಮಯ [3]ಹೇಮಾಸನದೊಳ್ ...ಳ್ದಿರ್ದನಂ ನೋಡಿ ಕಜ್ಜಂ ಪುಟ್ಟಿದೊಡೆಮಗೆ ಬೞಿ[4]ಯಟ್ಟದೀಪೊೞ್ತು ...ವುದು ಮನವಾೞ್ತಿಗೆೞ್ತಂದೆಯೆಂದೊಡೆ ಸುಯೋಧನನಿಂತೆಂದಂ—

ಹರಿ ಬಲದಿಂ ಪಾಂಡವರನು ।
ವರಮಂ ಪೊತ್ತಿಸಿದ[5]ರೆನ್ನೊ[ಳಾಂ] ಕರ[ಮುೞಿದಾ] ॥
ಹರಿಯಂ ಕೋಡಗಗಟ್ಟಾ ।
ಗಿರೆ ಕಟ್ಟಿದೊಡಂದು ನೀಮೆ ಬಿಡಿಸಿದಿರಲ್ತೇ ॥ ೬ ॥

ಕರಿಗಂ ಪರಮಾಣುಗಮಂ ।
ತರವಾವುದೊ ನಿಮಗಮಸುರ ವೈರಿಗ[6]ಮೇನಂ
ತರಮಂತೆ ನಿಮ್ಮೊಳಗ್ಗದ ।
ಪರಶುಧರಂ ಪೊಣರ್ದು ತಾನದಂದೇನಾದಂ ॥ ೭ ॥

ಪಿಡಿದರವರಸುರ ವೈರಿಯ ।
ನೊಡಂಬಡಿಂ ತೊೞ್ತುವೆಸದಿನಾಂ ನಿಮ್ಮಡಿಯಂ ॥

1 ತಿನೇಗಳ (ಕ.). 2 ಳ್ (ಕ.). 3 ಲೋಹಾ (ಕ. ಖ. ಗ.). 4 ಯನ ...ಖ.). 5 ರಾಸೆ ಕರಮಾದರವಾ (ಕ.), ರೆನ್ನೊಳ್ ಕರಮಾ (ಖ.), ರೆನ್ನೊಳ್ ...ಮಾದರವಾ (ಗ.), ರೆನ್ನೊಳ್ ಕೇಳ್ । ಕರಮಾದರವಾ (ಘ.). 6 ಮೆಂ ... ಗ. ಘ.) ಮಿಂ ? (ಪ.).

ಪಿಡಿದೆ[1]ನದೇಂತಾ[2]ನೆ[ಚ್ಚು]ಂ ।
ಪಿಡಿ[3]ದೊಡವರ್ಗಂದು [4][ಪಿ]ಡಿದರೆನ್ನ [5][ರೆ] ಗೆಲ್ಲಂ ॥ ೮

ಮ ॥ ಕೊರಲೊಳ್ ಕಟ್ಟಿದ ದೇವಿಯಂತಿರುರದೊಳ್ ಶ್ರೀ ತೊಟ್ಟಿಲೊ
ತರಮೆನ್ನೊಳ್ ನೆಲಸಿತ್ತು ನಿಮ್ಮ ದಯೆಯಿಂ ನಿಮ್ಮಂ ಕರಂ ನ
ಸಂ
ಗರಮಂ ಬಲ್ಲಿದರೊಳ್ ಪೊಣರ್ಚಿದೆನದರ್ಕೆನ್ನೊಳ್ [6]ರಣಶ್ರೀ
[7]ರಣಾ
ಜಿರದೊಳ್ ಮಾಣದೆ ಪೊರ್ದುವಂತೆ ಬೆಸಸಿಂ ನಿಮ್ಮೊಂದಭಿ
ಪ್ರಾಯಮಂ ॥೯

ವ॥ ಎಂದು ನುಡಿದ ತನ್ನ ಮೊಮ್ಮನ ನಯದ ವಿನಯದ ಸು
ಗಳ್ಗೆ ಕರುಣಿಸಿ ಕುರುವೃದ್ಧನಿಂತೆಂದಂ—

ಮ ॥ ಧೃತರಾಷ್ಟ್ರಂ ನುಡಿದಾರ್ತನೆ ಹರಿ ಭರಂಗೆಯ್ದಾರ್ತನೇ ನೀಂ ಪೃಥಾ
ಸುತರಂ ನೋಯಿಸಲಾಗದೆಂದು ನುಡಿದೇನಾಮಾರ್ತೆಮೇ
ನಿನ್ನೊರಂ
ಟುತನಂ ಕೈಗಣ್ಮಿವಾಯ್ತು ದಪ್ಪೊಡೆ ಮಹಾಭಾರಾವತಾರಂ ರಣೋ
ದ್ಯತನಾಗೆಂಬುದನೆಮ್ಮನನ್ಯರಪೋಲೇಂ ನೀಂ ಪ್ರಾರ್ಥಿಸ
ಲ್ವೇಟ್ಪುದೇ ॥ ೧೦

ವ॥ ಎಂಬುದುಂ ಮಹಾಪ್ರಸಾದಮೆಂದು ದುರ್ಯೋಧನ
ಪೋಗಿಸಿತ್ತ ಗಾಂಗೇಯಂ ತನ್ನಂತರ್ಗತಮೊಳ್—

---

1 ನೆನಗಾದ (ಕ.), ನಂತಾದ (ಖ.), ನನಂತಾ(ಗ.). 2 ನಚ್ಚಂ (ಕ.ಖ.ಘ.
ನೆಚ್ಚಂ (ಗ.). 3 ದೊಡನು (ಕ.), ದೆನ (ಖ. ಗ. ಘ.). 4 ಪಿಡಿದೊಡೆಂ (ಕ.
ಪಿಡದರೆಂ(ಖ. ಗ. ಘ.). 5 ದೆ (ಕ.), ತೆ (ಖ, ಗ. ಘ.). 6 ಜಯ ? (ಪ
7 ಯನಾ (ಘ.).

ಕಂ॥ ಅಣಿಯರವೊದವಿದ ಮುಳಿಸಿನೊ।
ಳಣಮುಜಿದವರೆಂದು ರಣದೆ ಜಯಿಸಲ್ ನಾರಾ।
ಯಣನೊಳಮುದಾತ್ತ ನಾರಾ।
ಯಣನೊಳಮಿಂತೆತ್ತಿಕೊಂಡ ಗಂಡರುಮೊಳರೇ ॥ ೧೧ ॥

ಎನ್ನನೆ ನಚ್ಚಿದನನುವರ।
ಕೆನ್ನನೆ ಪೂಣಿಸಿದನೆನಗೆರಟ್ಟಿಂಡಮುಮೋ॥
ರನ್ನರಿ ದಲೆಂತು ಕಾದುವೆ।
ನೆನ್ನಯ ಮಕ್ಕಳೊಳಮೆನ್ನ ಮೊಮ್ಮಕ್ಕಳೊಳಂ ॥ ೧೨ ॥

ಮಕ್ಕಳ ಮೊಮ್ಮಕ್ಕಳ ರಥ।
ಮೆಕ್ಕೆಯಿನೆಡೆಗೊಂಡೊಡವರನೋವದೆ ರಣದೊಳ್॥
ಮಕ್ಕಳನಾಂ ಕೊಂದೊಡೆ ತ।
ನಿಕ್ಕಿದ ತತ್ತಿಯನೆ ಪಾವು ನೊಣೆವಂತಕ್ಕುಂ ॥ ೧೩ ॥

ನರ ನಾರಾಯಣರಿರ್ವರೆ।
ಧುರದೊಳ್ ಮಾರ್ಕೊಳ್ವರೆನ್ನನೊರ್ವಂ ಮೊಮ್ಮಂ॥
ಪರಮ ಗುರುವೊರ್ವನವರಿ।
ರ್ವರುಮಂ ಕಾದಱಿವೆನುಱಿದ ರಿಪು ನೃಪ
ಬಲಮಂ॥ ೧೪ ॥

ವ॥ ಎಂದು ತನ್ನೊಳ್ ಬಗೆಯುತ್ತಿರ್ಪಿನಮತ್ತ ದುರ್ಯೋಧನಂ ಸಹಸ್ರ ಕಿರಣೋದಯದೊಳನೇಕ ಸಹಸ್ರ ನರಪತಿ ಪರಿವೃತನುಮಾಗಿ ಮಂದಾಕಿನೀ ತನೂಜಂಗೆ ಬಱಿಯನಟ್ಟಿ ಬರಿಸಿ ಮಣಿಮಯ ಪೀಠದೊಳ್ ಕುಳ್ಳಿರಿಸಿ ದೇವಾಸುರ ಯುದ್ಧದೊಳ್ ಗುಹಂಗೆ ವೀರಪಟ್ಟಮಂ ಕಟ್ಟುವ ಪುರಂದರನಂದಮನೆಪೋಲ್ತು—

ಉ॥ ತುಂಗ ಮೃದಂಗ ಶಂಖ ಪಟಹ ಧ್ವನಿ ದಿಕ್ತಟದಂತನೆಯ್ದೆ ವಾ।
ರಾಂಗನೆಯರ್ ಚಳಲ್ಲುಳಿತ ಚಾಮರಮಂ ನೆರೆದಿಕ್ಕೆ ಪಂಚ ರ॥

ತ್ನಂಗಳುಮಂ ಪುದುಂಗೊಳಿಸಿ ಪೊಂಗಳಸಂಗಳೊಳಿರ್ದ ಪು

ಯಂಗಳೊಳಬ್ಧಿಜಂ ಮಿಸಿಸಿ ಕಟ್ಟಿದನಾ ವಿಭು ವೀರಪಟ್ಟ

ವ॥ ಅಂತು ಪರಶುರಾಮನನಂಜಿಸಿದ ವೀರಂಗೆ ವೀರಪ
ಕಟ್ಟಿ ಪಗೆವರನೆನ್ನ ಮಂಚದ ಕಾಲೊಳ್ ಕಟ್ಟಿದೆನೆಂದು ಪ್ರೊಟ್ಟ
ಸುಯೋಧನನ ನುಡಿಯನವಕರ್ಣಿಸಿ ಕರ್ಣನಿಂತೆಂದಂ—

ಚಂ॥ ಭಗವತಿಯೇಱುವೇಱ್ವ ತೆರದಿಂ ಕಥೆಯಾಯ್ತಿವರೇಱು ನಿ
ಬಗೆದಿವರಿನ್ನು ಮ್ಲಾಂತಿಱುವರೆಂದು ವಿಮೋಹಿಸಿ ವೀರಪಟ್ಟ
ಬಗೆಯದೆ ಕಟ್ಟಿಪೈ ಗುರುಗಳಂ ಕುಲವೃದ್ಧರನಾಜಿಗುಯ್ದು
ಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ
ಧನಾ

ಕಂ॥ ಕಟ್ಟಿದ ಪಟ್ಟಮೆ ಸರವಿಗೆ।
ನೆಟ್ಟನೆ ಡೊರೆ ಪಿಡಿದ ಬಿಲ್ಲೆ ದಂಟೆಂಗೆಣೆ ಕ॥
ಣ್ಗೆಟ್ಟ ಮುದುಪಂಗೆ ಪಗೆವರ।
ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ ।

ಆದಿಯೊಳವರಂ ಪಿರಿದೊಂ।
ದಾದರದಿಂ ನಡೆಪಿವಜ್ಜರಪ್ಪುದಱಿಂದಂ॥
ಕಾದರಿವರವರೊಳವರುಂ।
ಕಾದರ್ ನೆರೆದಿವರೊಳೆಂತು ನಂಬುವೆ ನೃಪತೀ ।

ವ॥ ಎಂಬುದುಮಾ ನುಡಿಗೆ ಸಿಡಿಲ್ದು ಕುಂಬಸಂಭವನಿಂತೆ

ಕಂ॥ ಸಿಂಗದ ಮುಪ್ಪುಂ ನೆಗೞ್ದೀ।
ಗಾಂಗೇಯರ ಮುಪ್ಪುಮಿೞಿಕೆವಡೆಗುಮೆ ವನಮಾ

ತಂಗಂಗಳಿನಸುಹೃಚ್ಛತು ।
ರಂಗ ಬಲಂಗಳಿನದೆಂತು [1]ಮಂಗಾಧಿಪತೀ ॥ ೧೯ ॥

ಕುಲಜರನುದ್ಧತರಂ ಭುಜ ।
ಬಲಯುತರಂ ಹಿತರನೀ ಸಭಾ ಮಧ್ಯದೊಳ್ ॥
ಗ್ಗಲಿಸಿದ ಮದದಿಂ ಸಾಲಗೆ !
ಕುಲಮಂ ತುಬ್ಬುವವೊಲುಜಿದೆ ನೀಂ ಕೆಡೆ ನುಡಿವೈ ॥ ೨೦ ॥

ವ ॥ ಎಂದು ನುಡಿದ ಗುರುವಿನ ಕರ್ಣಕಠೋರ ವಚನಂಗಳ್ಗೆ
ರ್ಣಂಕಿನಿಸಿ—

ಂ ॥ ಕುಲಮನೆ ಮುನ್ನ ಮುಗ್ಗಡಿಸಿರೇಂ ಗಳ ನಿಮ್ಮ ಕುಲಂಗಳಾಂತು ಮಾ ।
ರ್ಮಲೆವನನಟ್ಟಿ ತಿಂಬುವೆ ಕುಲಂ ಕುಲಮಲ್ತು ಚಲಂ ಕುಲಂ ಗುಣಂ ॥
ಲಮಭಿಮಾನಮೊಂದೆ ಕುಲ[ಮಣ್ಮು ಕುಲಂ] ಬಗೆವಾಗಳೀ [ಗಳೀ] ।
ಲಹದೊಳಣ್ಣ ನಿಮ್ಮ ಕುಲಮಾಕುಲಮಂ ನಿಮಗುಂಟು ಮಾಡುಗುಂ ॥ ೨೧ ॥

ಕಂ ॥ ಗಂಗಾಸುತಂ ಪೃಥಾಸುತ ।
ರಂ ಗೆಲ್ದೊಡೆ ತಪಕೆ ಪೋಪೆನೆವರ್ಗಳ್ ಕೆಯ್ಯೊಳ್ ॥
ಗಾಂಗೇಯನಱಿದೊಡಹಿತರ ।
ನಾಂ ಗೆಲೆ ತಳ್ತಿಱಿವೆನನ್ನೆಗಂ ಬಿಲ್ವಿಡಿಯೆಂ ॥ ೨೨ ॥

ವ ॥ ಎಂದು ಕರ್ಣಂ ಪ್ರತಿಜ್ಞೆಗೆಯ್ವುದುಂ ಸಿಂಧುತನೂಜ
ಂತೆಂದಂ—

ಂ ॥ ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋ ।
ಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ ಭಾರತಂ ॥

---

1 ದಾಶಾ (ಕ.).

ಕಲಹಮಿದಿರ್ಚುವಂ ಹರಿಗನಪ್ಪೊಡೆ ಮೊಕ್ಕಳಮೇಕೆ ನೀಂ ಪ
ಚಲಿವಪೆಯಣ್ಣ ಸೂ[1]ೞ್ಪಿಡೆಯಲಪ್ಪುದು ಕಾಣ ಮಹಾಜಿ
ದೊಳ್ ॥

ವ॥ ಎಂದು ಮತ್ತಮಿಂತೆಂದಂ—

ಕಂ॥ ಮುದುಪರ ಬಿಲ್ಬಲ್ಮೆಯುಮಿಱು ।
ವದಟುಂ ಬಗೆವಾಗಳಣ್ಣನೆಂದಂತುಟೆ ತ ॥
ಪ್ಪದು ಕರಮೆ ತುಚ್ಛಮಕ್ಕುಂ ।
ಕದನದೊಳಿನ್ನೆನ್ನ [2]ನುಡಿದ ನುಡಿಯಂ ಕೇಳಿಂ ॥

ಮ॥ ಪಿಡಿಯೆಂ ಚಕ್ರಮನೆಂಬ ಚಕ್ರಿ[3]ಯನಿಳಾ ಚಕ್ರಂ ಭಯಂ
ಪಿಡಿಯಿಪ್ಪೆಂ ಕರಚಕ್ರಮಂ ನರ ರಥಂ ತೂಳ್ದಾ ಕುರುಕ್ಷೇತ್ರದ
ಪಡುವೆಣ್ಣಾವುದು ಪೋಗೆ [4]ಪೋಗಡಿಸುವೆಂ ನಿಚ್ಚಂ ಧರಾಧೀಶ
ಪಡಲಿಟ್ಟಂತಿರೆ [5]ಪೂಣ್ಪಿನೋವದೆ ಪಯಿಂಛಾಸಿರ್ವರಂ ಯ
ದೊಳ್ ॥

ವ॥ ಎಂದು ಮಹಾ ಪ್ರತಿಜ್ಞಾರೂಢನಾದ ಗಾಂಗೇಯನಳ
ವಲ್ಲದೆ ಪೊಗಟ್ಟಿವರಂ ಬೀಡಿಂಗೆ ಬಿಜಯಂಗೆಯ್ಯಿಮೆಂದು ಕಳಿಪಿ ವ
ದಿವಸಂ ಯುದ್ಧಸನ್ನದ್ಧನಾಗಿ ಪ್ರಯಾಣ ಭೇರಿಯಂ ಪೊಯ್ಸಿದಾಗಳ

ಮ॥ ಕೆಡೆದಂ ಪದ್ಮಜನಾಸನಾಂಬುರುಹದಿಂದಾಗಳ್ ಸುರೇಂದ್ರಾ
ನಡುಗಿತ್ತರ್ಕನಳುರ್ಕೆಗೆಟ್ಟು ನಭದಿಂ ತೂಳ್ದಂ ಮರುಳ್ದಪ್ಪಿದ
ಮೃಡನಂ ಗೌರಿ ಸಮಸ್ತಮೀ ತ್ರಿಭುವನಂ ಪಂಕೇಜ ಪತ್ರಾ
ವೋ
ನಡುಗಿತ್ತೆಂಬಿನಮುರ್ವಿ ಪರ್ವಿದುದು ತತ್ಸನ್ನಾಹ ಭೇರೀ
॥

1 ಟ್ಟಿ (ಕ.). 2 ಪೇಟ್ಟಿ (ಕ.). 3 ಯಿ (ಗ.). 4 ಪೋಗಲೆ (
5 ಕೊಲ್ವೆ ನಾನಯುತಮುಂ ಭೂಪಾಲರಂ (ಖ.).

ವ॥ ಅಂತು ಮೊಱಗುವ ಭೇರೀ ರವದೊಡನೆ ನೆಲಂ ಮೊಱಗೆಯುಂ
ತಳ್ತಿತ್ತಿದ ವಿಚಿತ್ರ ಕೇತುಗಳೊಡನುತ್ಪಾತಕೇತುಗಳ್ ಮೂಡೆಯುಂ
ಪಿರ್ವೆಂಡಿರ್ ಸೂಸುವ ಸೇಸೆಯೊಡನೆ ರುಧಿರ ವರ್ಷಂ [1]ಸುರಿಯೆಯುಂ
ಂತ ಪುರೋಹಿತ ಜಯ ಜಯ ಧ್ವನಿಗಳೊಡನೆ ಹಾಹಾಕ್ರಂದನ ಧ್ವನಿಗಳ
ಮಿತ್ತಮಾಕಾಶದೊಳ್ ನೆಗೞ್ತೆಯುಂ ಕಾದುವೆನೆಂದು ನೆಗೞ್ತೆ ನುಡಿದ
ುಡಿಯುಮಂ ಪಿಡಿದ ಚಲಮುಮಂ ಬಗೆದು ಸೆರಗಂ ಬೆರಗುಮಂ
ುಗೆಯದೆ ಮಂಗಳಾಭರಣದೊಳ್ ನೆಱೆಯೆಕೆಯ್ಗೆಯ್ದು ಮುತ್ತಿನ
ರಾಣಿಕದ ಮಂಡನಾಯೋಗಂಗಳೊಳಾಯೋಗಂಗೊಂಡು ಬಂದ
ದಾಂಧ ಗಂಧ ಸಿಂಧುರಮಪ್ಪ ಪಟ್ಟವರ್ಧನದ ಬೆಂಗೆವಾಯ್ದು—

ಕಂ॥ ನಯಮನಯಂ ಜಯಮೆನಗಪ।
ಜಯಮಿದು ಯಶಮಯಶಮೆಂಬಿದಂ ಬಗೆಯದೆ ನಿ॥
ಶ್ಚಯಿಸಿ, ಕಲಹಮನೆ ಮನದೊಳ್।
ಭಯಮಱಿಯದ ಕಲಿ ಸುಯೋಧನಂ ಪೊಱಮಟ್ಟಂ
॥೨೭॥

ವ॥ ಅಂತು ಪೊಱಮಟ್ಟು ಮುಂದೆ ಪರಿವ ಧವಳಚ್ಛತ್ರ ಚಾಮರಂ
ಳುಂ ಮಿಳಿರ್ವ ಪಾಳಿ ಕೇತನಂಗಳುಂ ಪೊಯ್ವ ಪಂಚಮಹಾ ಶಬ್ದಂಗಳುಂ
ನಗೆ ರಾಜ ರಾಜ ಶಬ್ದಮನನ್ವರ್ಥಂ ಮಾಡೆ ಜಯದ್ರಥ ಜಯತ್ಸೇನ
ುದಕ್ಷಿಣ ಶಲ್ಯಶಕುನಿ ಧೃಷ್ಟಕೇತು ನೀಳ ಭಗದತ್ತ ಶ್ರುತಾಯುಧ
ಯತಾಯುಧಾಚ್ಯು[2]ತಾಯು[ಧಾ]ದಿಗಳಪ್ಪ ಪನ್ನೊಂದಕ್ಷೋಹಿಣೀ
ತಿಗಳುಂ ಗಾಂಗೇಯ ದ್ರೋಣಾಶ್ವತ್ಥಾಮ ಕೃಪ ಕೃತವರ್ಮ ಪ್ರಭೃತಿ
ಳುಂ ಕರ್ಣ ವೃಷಸೇನ ಚಿತ್ರಸೇನರೆಂಬ ತಂದೆ ಮಕ್ಕಳ್ ಮೂವರುಂ
ರಸು ಬರೆ ಬಾಹ್ಲಿಕ ಭೂರಿಶ್ರವಸ್ಸೋಮದತ್ತರೆಂಬ ಮೂವರುಮನಂತ
ಲಂಬೆರಸು ಕೂಡಿಬರೆಯವಂತಿ ದೇಶಾಧೀಶ್ವರರಪ್ಪ ವಿಂದಾನುವಿಂದ
ಪ್ಬ[3]ತ್ತು ನಾಲ್ಸಾಸಿರ ಮದದಾನೆವೆರಸು ಬಂದು ಕೂಡೆ ಕಳಿಂಗ ರಾಜಂ
ೀಮಧೂರ್ತಿಯುಂ ಭೀಮಸೇನನ ಕೆಯ್ಯೊಳ್ ಸತ್ತ ಬಕಾಸುರ ಜಟಾ

1 ಸೂಸೆ (ಕ. ಖ). 2 ತಾದಿ (ಕ. ಖ.), ತಾಯುಧ (ಘ.). 3 ತ್ತ (ಸ.)

ಸುರರ ಮಕ್ಕಳ್ ಚತುಸ್ತ್ರಿಂಶತ್ಸಹಸ್ರ ನಕ್ತಂಚರ ಪರಿವೃತ [1]ಹಳ
ಮುಸಲಾಯುಧ ಕಾಳ ನೀಳ ವಿದ್ಯುನ್ಮಾಲ್ಯಾದಿಗಳುಂ ಬಂದು
ತ್ರಿಗರ್ತಾಧೀಶಂ ಸುಶರ್ಮನುಂ ಸಂಸಪ್ತಕರ್ ಪದಿನೆಂಟು ಕೋಟಿ
ಬೆರಸು ಬಂದು ಕೂಡೆ ಮತ್ತಮನೇಕ ದೇಶಾಧೀಶ್ವರರುಂ ಬರೆ ಯು
ದುಶ್ಶಾಸನ ಚಿತ್ರಸೇನ ದುಸ್ಸಹ ದುಸ್ಸಳ ವಿಂದಾನುವಿಂದ ದುಧ
ದುರ್ಮರ್ಷಣ ದುಸ್ಸ್ಪರ್ಶನ ಸುಬಾಹು ದುರ್ಮುಖ ದುಷ್ಕರ್ಣ
ವಿವಿಂಶತಿ ಸುಲೋಚನ ಚಿತ್ರೋಪಚಿತ್ರ ನಂದೋಪನಂದ ಚಿತ
ಚಿತ್ರಕುಂಡಲ ಜರಾಸಂಧ ಸತ್ಯಸಂಧ ಸುಹಸ್ತ ದೃಢಹಸ್ತ
ದೀರ್ಘಬಾಹು ಮಹಾಬಾಹುಗಳ್ ಮೊದಲಾಗೆ ತನ್ನ ನ
ತಮ್ಮಂದಿರುಂ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳು
ಅಿದು ಬಳಸಿಬರೆವಿಳಯಕಾಳ ವಾತಾಹತಿಯಿಂ ಜಳನಿಧಿಯೆ ತ
ತಳರ್ದು ಕುರುಕ್ಷೇತ್ರಕ್ಕೆ ಮೊಗಸಿದಾಗಳ್—

ಚಂ॥ ಕರಿ ಮಕರಂಗಳಂ ಕರಿ ಘಟಾವಳಿಯುಬ್ಬ ಕುಳಂಗಳಂ ಭ
ಕರತರಮಾದ ಪೆರ್ದೆರೆಗಳಂ ಹಯ ಸಂತತಿ ಮತ್ಸ್ಯ ಕೋಟಿ
ಸ್ಫುರಿತ ನಿಶಾತ ಹೇತಿಯುತ ಸದ್ಭಟ ಕೋಟಿ ನಿರಂತರಂ
ಸ್ಫುರಿಸಿರೆ ಘೂರ್ಣಿತಾರ್ಣವಮನೊತ್ತರಿಸಿತ್ತು
ಚತುರ್ಬಲಾರ್ಣವಂ

ಮ॥ ಮದವದ್ದಂತಿ ವರೂಥ ವಾಜಿ ಭಟ ಸಂಘಾತಂಗಳೀ ಲೆಕ್ಕ
ಬುದನಾಂ ನಿಟ್ಟಿಸಲಾಱೆನೊಂದನಱಿವೆಂ ತತ್ಸೈನ್ಯ
ಪಾದೋ
ಪುದಿದೆತ್ತಂ ರಜಮಂಬರಸ್ಥಳಮುಮಂ ಮುಟ್ಟೆತ್ತು ತಳ್ತು ವಿ
ರ್ದೊಡಾ ಮುನ್ನಿನ [2]ತೆಳ್ಪುಗೆಟ್ಟು ಕೆಸಱಾಯ್ತಾಕಾಶ
ಗಂಗಾ ಜಲಂ

1 ನ (ಘ.). 2 ತಳ್ಪಿ (ಖ. ಗ. ಘ.).

|| ರವಿ ಕಿರಣಾಳಿಗಳ್ ಧ್ವಜ ಪ[1]ಟಾಳಿಯ ತಿಂತಿಣಿಯಿಂದ ಮುರ್ಚಲಾ।
ಱವೆ ರವಿ ವಾಜಿಗಳ್ ನೆಗೆದ ಪಾಂಸು[2]ಗಳಿಂ ದೆಸೆಗೆಟ್ಟು ಪೋಗಲಾ॥
ಱವೆ ರವಿ ಬಿಂಬಮುಂದೆಸೆಯಲಾಱದೆ ಪೆಂಪಿನ ತಿಣ್ಪನಾಂತ ಕೌ।
ರವ ಬಳವಂತು ಮೇರೆ ಪವಣೆಂಬುದನಿನ್ನಱಿವಂದಮಾವುದೋ ॥ ೩೦ ॥

|| ಮದವದ್ದಂತಿ ಮದಾಂಬುಧಾರೆಗಳವಂದೊಂದೊಂದಱೊಳ್ ಕೂಡೆ ಪ।
ಣ್ಣಿದ ಜಾತ್ಯಶ್ವ ರಥಾಶ್ವ ಸಂಕುಳ ಖಲೀನೋದ್ಭೂತ ಲಾಲಾ ಜಲಂ॥
ಕದಡೆೞ್ದತ್ತು ಮುವುಂಕೆ ಬೇಱೆ ಪರ ಭಾಗಂ ಬೆತ್ತು ಲೋಕಕ್ಕೆ ಸ।
ನ್ನಿದವಾಗಿರ್ದುವು ಕೌರವ ಧ್ವಜಿನಿಯೊಳ್ ಕಾಳಿಂದಿಯುಂ ಗಂಗೆಯುಂ ॥ ೩೧ ॥

ವ॥ ಅಂತು ದುರ್ಯೋಧನಂ ತನ್ನ ಬಲದ ಕರಿಘಟೆಗಳ ಕರ್ಣ ...ಳಾಹತಿಯಿಂ ಕುಲಗಿರಿಗಳಳ್ಳಾಡೆಯುಂ ತನ್ನ ಬಲದ ಪದಾಭಿಘಾತ ...ಳಿಂ ಕುಲಗಿರಿಗಳ್ ಜೀಱಿಟ್ಟು ಪಾಱೀೞೆಯುಂ ತನ್ನ ಬಲದ ...ೋತ್ಥಿತ ರಜಮೆ ಮಹಾ ಸಮುದ್ರಂಗಳಂ ತೆಕ್ಕನೆ ತೀವೆಯುಂ ನಿಚ್ಚ ...ಣದಿಂ ಬಂದು ಕುರುಕ್ಷೇತ್ರವ ಪೂರ್ವ ದಿಗ್ಭಾಗದೊಳ್ ಪ್ರಳಯಂ ...ರಿವಿಟ್ಟಂತೆ ಬೀಡಂ ಬಿಟ್ಟು ಧರ್ಮಪುತ್ರನಲ್ಲಿಗುಳೂಕನೆಂಬ ದೂತನ ...ತೆಂದಟ್ಟಿದಂ—

|| ಮಸೆಯಿಸುಗುಳ್ಳ ಕೆಯ್ದುಗಳನರ್ಚಿಸುಗಾನೆಗಳಂ ತಗುಳ್ದು ಪೂ।
ಜಿಸುಗೆ ನಿಶುದ್ಧ ವಾಜಿಗಳ ನಾಜಿಗೆ ಜೆಟ್ಟಿಗ[3]ರಾಗಿ ಕೊಳ್ಳಿವೀ॥
...ಸಿಸುಗೆ ನಿರಂತರಂ ರವಳಿ ಘೋಷಿಸುಗಿಂದೆ ಕಡಂಗಿ ಸಾರ್ಚಿ ಬಿ।
ಟ್ಟುಸಿರದೆ ನಿಲ್ವ ಕಾರಣಮದಾವುದೊ ನೆಟ್ಟನೆ ನಾಳೆ ಕಾಳೆಗಂ ॥ ೩೨ ॥

1 ತಾಕೆ (ಕ.). 2 ಲದಿಂ (ಖ. ಗ. ಘ.), 3 ರಾಂತು ಕೊಳ್ಗೆ (ಕ.).

ವ|| ಎಂದಾ ದೂತನಾಪಾಱಿಸ್ಸಿಯೊಳೆ ಬಂದು ಪೇೞೆ ಕೇಳ
ಯಮನಂದನನಿಂತೆಂದಂ—

ಚಂ|| ಪಗೆ ಮಸೆಪಂ[1]ದೆ ಕೆಯ್ದು ಮಸೆದಿರ್ದುವು ಪೂಜಿಸು[2] ಪಂಕದಾ
[3][ವಾ
ಜಿ] ಗಳಿಮಗಿಲ್ಲ [4]ಜಟ್ಟಿಗರೆ ಎನ್ನೊಡಪುಟ್ಟಿದರಲ್ತೆ ನಾಲ್ಕುಮಾ ||
ನೆಗಳ್ಪವನಾಂ [5]ದಲೀ ರಣದೊಳರ್ಜಿಸಿ ಬಿಟ್ಟಪೆನೀ[ಟೆ] ಮಾಣ್ಬೆನಾ
ವಗಮಿದನಿಂತೆ [6]ಪೇೞ್ ನೆಱೆ[ಯೆ] ನಾಳೆಯೆ ಕಾಳೆಗಮಂ
ಗೆಯ್ವೆಮಾಂ || ೩೩

|| ಎಂದಾ ದೂತನಂ ವಿಸರ್ಜಿಸಿ ಪುಂಡರೀಕಾಕ್ಷಂಗೆ ಬಱಿಯನಟ
ಬಱಿಸಿ ನಮ್ಮ ಪಡೆಯೊಳಾರ್ಗೆ ವೀರಪಟ್ಟಮುಂ ಕಟ್ಟುವಂ ಪೇೞಿಮೆನೆ—

ಶಾ|| ಮಾತಂಗಾಸುರ ವೈರಿಯಲ್ಲಿ [7]ಪಡೆದಂ ಬಿಲ್ಲಂ ಧನುರ್ವಿದ್ಯೆಗಂ |
ತಾತಂಗಗ್ಗಳಮಾರುಮಲ್ಲದಱಿನಾ ಶ್ವೇತಂಗಮಂತಾ ನದೀ ||
ಜಾತಂಗಮಂ ದೊರೆ ಯುದ್ಧಮೆಂದಱಿದು ತಚ್ಛ್ವೇತಂಗೆ
ಭೂಲೋಕ ವಿ
ಖ್ಯಾತಂಗಗ್ಗಳ ವೀರಪಟ್ಟಮನುದಾರಂ ಕಟ್ಟಿದಂ ಧರ್ಮಜಂ ||೩೪

ವ|| ಅಂತು ವಿರಾಟ ನಂದನನಂ ಧರ್ಮನಂದನಂ ಸೇನ
ನಾಯಕನಂಮಾಡೆ ನಾಳೆ ಕಾಳೆಗಮೆಂದು ಪಡೆವಳರ್ ಪೋಗಿ ಸಾಱ
ಮೆಂಬುದುಮವರ್ ಬೀಡು ವೀಡುಗಳ್ಗೆಲ್ಲಂ ಸಾಱಿದಾಗಳ್—

ಚಂ|| ಪಗೆ ಸುಗಿವನ್ನೆಗಂ ಮಸೆವ ವೀರ ಭಟರ್ಕಳ ರೌದ್ರಮಪ್ಪ ಕೆ |
ಯ್ದುಗಳೆನಗು[8]ರ್ವಿನದ್ಭುತದಿನುರ್ವಿದ ಕೆಂಗಿಡಿಗಳ್ ಪಳಂಚಿ ತೊ

---

1 ತೆ (ಕ. ಗ.), ಕ (ಖ.). 2 ವಾ ಮದೇಭ? (ಪ.), 3 ಕೆ| ಯ್ದು (
ಖ. ಗ.), ಯ | ಶ್ವ (ಘ.). 4 ಬಿತ್ತಿಗರೆ (ಕ.), ವೃತ್ತಿಗಳೆ (ಖ.), ವೃತ್ತಿಗರೆ (
ಘ.). 5 ತೊಡೀ (ಕ.), ತಡೀ (ಖ.). 6 ಪೇೞ್ವಿರೆದು (ಕ. ಘ.), ಪೇಳ್ದಿರೆ
(ಘ.), ಪೇೞಱಿದು (ಗ.). 7 ಧನುವಂ ಕಲ್ತಂ (ಕ.), ಕಲಿತಂ ಬಿಲ್ಲಂ (ಘ.
ಕಲಿ ಬಿಲ್ಲಂ (ಗ.). 8 ರ್ವು ಪರ್ವ್ವವಿನಪುರ್ವಿದ (ಕ.), ರ್ವಿನ . . . ಮುರ್ವಿ
(ಖ.), ರ್ವಿ ಮುರ್ವಿದ ಕಲಂಕಿದ (ಗ.).

ಟ್ಟಗೆ, ಕೊಳೆ ಪಾಯ್ದುವೋಲ್ ಪೊಳೆ[1]ವ ಸಂಜೆಯ ಕೆಂಪದು
ಸಾಣೆಗೊಡ್ಡಿದಿ |
ಟ್ಟಗೆಯ [2]ರಜಂಬೊಲೆಂಬಿನೆಗಮಸ್ತಮಯಕ್ಕಿೞಿದಂ ದಿವಾಕರಂ,
|| ೨೫ ||

ವ|| ಆಗಳುಭಯ ಬಲಂಗಳೊಳಂ ಚಾತುರ್ಯಾವಸಾನ ಘಟಿತ
೦] ಟಿಕಾ ಧ್ವನಿಗಳುಂ ಸಂಧ್ಯಾ ಸಮಯ ಸಮುದಿತ ಶಂಖಧ್ವನಿಗಳುಂ
ಚ ಮಹಾಶಬ್ದಧ್ವನಿಗಳುಮೊಡನೊಡನೆ ನೆಗೞ್ದುವಾಗಳೆರಡುಂ ಬೀಡು
ಳಂ ಘೋರೆಂದ್ರಾರ್ದ್ದುರವಳಿ ಘೋಷಿಸಿ ಕೊಳ್ಳಿವೀಸಿದಾಗಳ್—

ಕಂ|| ಉರಿಘುಟ್ಟಿದರಳೆಯಂತಂ |
ಬರಮುರಿದತ್ತಜನ ಪದ್ಮ ವಿಷ್ಟರ ದೆಸಳಂ ||
[3]ದರೆ ಸೀ[4]ದುವಖಿಳ ದಿಗ್ದ್ವಿರ |
ದ ರದಂಗಳ್ ಕರಮೆ ಕರಿಪುಗಾಱಿದುವಾಗಳ್ || ೨೬ ||

ವ|| ಅಂತು ಕೊಳ್ಳಿ[5]ವೀಸಿದಿಂಬೞಿಯಂ—
ಕಂ|| ಧೃತ ಧವಳ ವಸನರಾರಾ |
ಧಿತ ಶಿವರರ್ಚಿತ ಸಮಸ್ತ ಶಸ್ತ್ರರ್ ನೀರಾ ||
ಜಿತ ತುರಗರೊಪ್ಪಿದರ್ ಕೆಲ |
ರತಿರಥ ಸಮರಥ ಮಹಾರಥಾರ್ಧರಥರ್ಕಳ್ || ೨೭ ||

ಉಡಲುಂ ತುಡಲುಂ ವಸ್ತ್ರಂ |
ತುಡುಗೆಯು ನ್ನಾನೆಯುಮನರ್ಥಿ ಸಂತತಿಗೀಯಲ್ ||
ಬಿಡುವೊನ್ನುಮನ್ನಾ[6]ಳ್ಗಟ್ಟುವ |
ತೊಡರ್ರೊಳ್ ತೊಡರ್ದಿರ್ದರರಸು ಮಕ್ಕಳ್ ಕೆಲಬರ್
|| ೨೮ ||

1 ಯೆ? (ಪ.). 2 ರುಣಂ? (ಪ.). 3 ಥ (ಕ. ಖ.). 4 ದ.ದ (ಕ.).
(ಗ.). 5 ದಿಸಿ (ಕ.). 6 ಳ (ಖ.), ಳ್ದ (ಘ.).

ವ॥ ಆ ಪ್ರಸ್ತಾವದೊಳ್ಬೊರ್ವಂ ತನ್ನ ಬೋರ್ವಲವಗುವಿ
ನೊಳುರ್ವೀಪತಿಯ ನಿಂತೆಂದಂ—

ಉ॥ ನಾಳೆ ವಿರೋಧಿ ಸಾಧನ ಘಟಾಘಟಿತಾಹವದಲ್ಲಿ ನಿನ್ನ ಕ।
ಟ್ಟಾಳಿರೆ ಮುಂಚೆ ತಾಗದೊಡಮುಳ್ಕುಱಿ ತಾಗಿ ವಿರೋಧಿ ಸೈನ್ಯ ಭೂ
ಪಾಳರನೊಂದೆ [1]ಪೊಯ್ಯದೊಡಮೀ ತಲೆ ಪೋದೊಡಮುಟ್ಟಿಯಕ [2]ಕ
ಟ್ಟಾಳನೆ ಮುಟ್ಟೆ ತಳ್ತಿಱಿಯದಿರ್ದೊಡಮಂಜಿದೆನಾಂ ಮಹೀಪತಿ ॥ ೩೯

ವ॥ ಎಂದು ತನ್ನ ಮನದ ಪ್ರೌಢಪ್ರುಮಂ ಕೂರ್ಪುಮನ್ನುಂ
ಮಾಡಿ, ನುಡಿದಂ ಮತ್ತೊರ್ವಂ ತನ್ನ ನಾಳ್ದಂ ಪೆರ್ಚಿ ಪೊರೆದುದರ್ಕೆ ಕರ
ಮೆಯ್ವೆರ್ಚಿ ನುಡಿದಂ—

ಚಂ॥ ಒದವಿದ ನಿನ್ನದೊಂದು ದಯೆ ಮೇಣ್ ಪಿರಿದೋ ನೆಗೞ್ದಿನ್ನ ಗಂಡುಮಾ
ದವಟುಮುಳ್ಕುರ್ಕೆಯುಂ ಪಿರಿದೊ ಸಂದೆಯಮಾದಪುದಿಂತಿದಿಲ್ಲಿ ತೂ
ಗಿದೊಡಱಿಯಲ್ಕೆ ಬಾರದದು ಕಾರಣದಿಂ ರಿಪು ಭೂಪ ದಂತಿ ದ
ತದ ತೊಲೆಯೊಳ್ ಪರಾಕ್ರಮದಿನೆನ್ನನೆ ಭೂಪತಿ ತೂಗಿ ತೋಱಿನೇ ॥ ೪೦

ವ॥ ಎಂದು ತನ್ನ ಸೆರಗಂ ಬೆರಗುಮಿಲ್ಲದ ಕಲಿತನಮನಱಿಂ
ನುಡಿದಂ ಮತ್ತಮೊಂದೆಡೆಯೊಳೊರ್ವ ವೀರಭಟನುದಾರ ವಿ
ರಸ ರಸಿಕನಾಗಿ—

ಚಂ॥ ಕುದುರೆಯನೇಱಿದಂಬೆರಸು ಸೌಳಿನೆ ಪೋಗಿರೆ [3]ಪೊಯ್ದುಮೆಂ ಕ
ಟ್ಟಿದಿರೊಳೆ ನೂಂಕಿದಾನೆಗಳ ಕೋಡುಗ[4]ಳಂ ಬಳಿವೋಗೆ ಪೊಯ
ಮ್ಮಾಂ

1 ಕೆ. (ಕ.ಖ.). 2 ಭೂ। ಪಾಳರ ಸೇನೆದಪ್ಪಿ (ಕ.). 3 ಪಾ (ಕ. ಖ.
4 ಳುಂ (ಕ. ಖ.).

ತದಟರ[1]ನೊಂದೆವೊಯ್ದುಮೆರಡುಂ ಬಲಮೆನ್ನನೆ ನೋಡೆ ತಕ್ಕಿ[2]ನಿ
ನ್ನದಟುಮನೆನ್ನ ವೀರಮುಮನಾಜಿಯೊ[3]ಳೆನ್ನರಸಂಗೆ ತೋಱುವೆಂ
|| ೪೧ ||

ವ || ಎಂದತಿ ರಭಸ ರಣ ವ್ಯಸನಮನಾತ್ಮೀಯ ಶಾಸನಾಯತ್ತಂ ಮಾಡಿದಂ ಮತ್ತೊರ್ವನತ್ಯುಗ್ರ ಮಂಡಳಾಗ್ರಮನನುಗೆಯ್ದು ವೀ[4]ರ ಗ್ರಹ ಗ್ರಸ್ತನಾಗಿ—

*ಚಂ|| ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚಿ
ಮಾ |
[5]ರ್ಕಿಡಿವಿಡೆ ನೋಡಲಂಜಿ ದೆಸೆ ದೇವತೆಗಳ್ ಪೆಜಸಿಂಗೆ ತೋಳ
ತೀನ್ ||
ಕಿಡೆ [6]ನಲಿದೊಂದೆರಟ್ಟುದುರೆಯಟ್ಟಿಯುಮೊಂದೆರಡಾನೆಯಟ್ಟಿ
ಯುಂ |
ತೊಡದೊರ್[7]ಡನಾಡೆ ತಳ್ತಿಱಿಯದಿರ್ದೊಡೆ ಜೋಳಮನೆಂತು
ನೀಗುವೆಂ || ೪೨ ||

ವ || ಎಂದು ನಿಜ ಭುಜ ವಿಜಯಮನಪ್ಪುಕೆಯ್ದು ನುಡಿದಂ ಮತ್ತೊರ್ವನಲ್ಲಿಯೆ—

ಮ || ಸುರಲೋಕಂ ದೊರೆಕೊಳ್ವುದೊಂದು ಪರಮ ಶ್ರೀ ಲಕ್ಷ್ಮಿಯುಂ
ಬರ್ಪುದ್ದಾ |
ದರದಿಂ ದೇವ ನಿಕಾಯದೊಳ್ ನೆರೆವುದೊಂದುತ್ಸಾಹಮುಂ ತನ್ನ
ಮೆ ||

1 ನಂ (ಘ.). 2 ನಂ| ತ (ಕ. ಖ), ದೆಂ| ನ (ಗ.). 3 ಳಾಂ ನೆಜಪೆಂ ನೃಪಾಲಕಾ (ಘ.). 4 ರ್ಯ (ಕ.). 5 ರ್ಕಡೆ(ಗ.), ರ್ಕಡಿ (ಖ. ಘ.). 6 ವ (ಕ. ಖ.). 7 ಡೆ ನಾಳೆ (ಕ. ಖ.).

* ೨೫೬ ನೆಯ ಪುಟದಡಿಯಲ್ಲಿರುವ ಟಿಪ್ಪಣಿಯನ್ನು ನೋಡಿರಿ.

ಯ್ಸಿರಿ ಭಾಗ್ಯಂ ನೆರೆ[1]ಮಪ್ಪುದೊಂದೆ ರಣದೊಳ್ ಗೆಲ್ದಾ ಜಿಯ
[2]ತಳ್ತು ಸ
ಗರದೊಳ್ ಜೋಳದ ಪಾೞಿಯಂ ನೆರಪಿದಂ ಗಂಡಂ ಪೆಱಂ
ಗಂಡನೇ ‖ ೪

ವ ‖ ಎಂದು ನುಡಿದಂ—

ಮ ‖ ತನೆ ಮಾಱಾಂತ ಬಲಂ ಕಱುತ್ತಿಱಿದು ತನ್ನಾಳ್ದಂ ಕರಂ ಮೆಚ್ಚೆ
ಲ್ದವನಂ ಶ್ರೀವಧು ಪತ್ತುಗುಂ ಮಡಿದನಂ ದೇವಾಂಗನಾನೀಕವ
ತ್ಸವದಿಂದು[3]ಯ್ಗುಮದೆಂತುಮಿಂಬು ಸುಭಟಂಗಿಂತಪ್ಪುದಂ
ಕಂಡುಮ
ಱುವನೇಕಂಜುವನೆಂದು ಪೆರ್ಚಿ ನುಡಿದಂ ಮತ್ತೊರ್ವನಾಸ
ದೊಳ್ ‖ ೪

ವ ‖ ಅಂತು ನುಡಿದೆರಡುಂ ಬಲಂಗಳುಂ ತಂತಮ್ಮ ವೀರ
ಚಾಗಮುಂ ಮೆಱೆದು ತಮ್ಮ ಕೆಯ್ದುಗಳನರ್ಚಿಸಿ ದರ್ಭಶಯನಂ ಪ
ಪಲ್ಲಂ ಸುಲಿದು ಶಸ್ತ್ರ [4]ಸಂಗ್ರಹರಾಗಿ ಪಲರುಂ ವೀರ ಭಟರ್ ತನ
ತಾಮೆ ಪರಿಚ್ಛೇದಿಸಿರ್ದರತ್ತ ಮತ್ತಮೊರ್ವಂ ತನ್ನ ನಲ್ಲಳೊಳಿಂತೆಂ
ಪೊಱಱ್ತು ಪೊೞ್ತು ನಾಳೆ ದೇವಲೋಕದ ಕನ್ಯಕೆಯರೋಲಗದೊಳ
ನೆಂದು ನುಡಿಯೆ ನೀನೆಂದಂತು ಪೋಗಲ್ ತೀರದು ನಾಳೆ ಮಗು
ಬಂದೆನ್ನೊಳ್ ನೆರೆದಪೆಯೆಂದು ಪೇೞೆ ನಿನಗಱಿವುಂಟೆ ಎಂದು ಕೇಳ
ನ್ನೋಲೆವಾಗ್ಯಮುಂಟೆಂದಳ್ ಮತ್ತಮೊಂದೆಡೆಯೊಳೊರ್ವಳ್ ದ
ಶಯನಸ್ಥನಾದ ನಿಜ ಪ್ರಾಣೇಶ್ವರನ ಪರಿಚ್ಛೇದಮನಱಿದು ತನ್ನ ಸಾ
ಪರಿಚ್ಛೇದಿಸಿ—

1 ದ (ಖ.). 2 ಗೆಲ್ದು (ಕ. ಗ.), . . . (ಖ.). 3 ಯ್ವುದು ಸೂಸೆ ಪ
(ಕ.), ಯ್ವುದು ಸೂಸೆ ಪಾಸು (ಖ.), ಯ್ವುದು ಮಾಸೆ ಪಾಸು (ಗ.
4 ಶಯನ (ಕ.ಖ.ಗ.)

ಉ ॥ ತಾಂ ಗಡ ನಾಳೆ ಪೋಗಿ ದಿವಿಜಾಂಗನೆಯೊಳ್ ತೊಡರ್ದಿರ್ಪನಿಲ್ಲಿ ಮಾ।
ಣ್ದಾಂ ಗಡಮಿರ್ಪೆನಂತನಿತು [1]ಬೆ[ಳ್ಳಿ]ನೆ ಮುನ್ನಮೆ ಪೋಗಿ ನಲ್ಮೆಗೆ ॥
ಲ್ಲಂಗೊಳೆ ದೇವ ಲೋಕದೊಳಧೀಶನನಾನಿದಿರ್ಗೊಳ್ವೆನೋವೊ ಸ।
ಗ್ಗಂಗಳೊಳಿರ್ಪ ದೇವಡಿತಿ ತೊೞ್ತಿರೊಳಟ್ಟಿಯನಾಗಲೀವೆನೇ ॥ ೪೫ ॥

ವ ॥ ಎಂದು ಕೈದವಮಿಲ್ಲದ ನಲ್ಮೆಯಿಂ ನಾಲಗೆಯ ತುದಿಗೆ ತಂದು ನುಡಿದಳ್ ಮತ್ತೊರ್ವಳ್ ತನ್ನಾಣ್ಮನ ದೋರ್ವಲದಗುರ್ವಂ ನಚ್ಚಿ—

ಚಂ ॥ ಜಳಧಿಯೊಳಾದ ಮುತ್ತುಗಳವೇಂ ಪೊಸತಾದುವೆ ನಿನ್ನ ತೋಳ ಬಾ।
ಳೊಳ್ ಬಲ ಗರ್ವದಿಂ ತೆಗೆದ್ದುದಗ್ರ ವಿರೋಧಿ ಮದೇಭ ಮಸ್ತಕ॥
ಸ್ಥಳ ಜಳರಾಶಿಯೊಳ್ ಬಳೆದ ನಿರ್ಮಳ ನಿರ್ವ್ರಣ ವೃತ್ತ ಮೌಕ್ತಿಕಾ।
ವಳಿಯನೆ ತರ್ಪುದೆಂದು ನುಡಿದಟ್ಟಿಱಿಸೊಳಾಱಿಸಿದಳ್ ನಿಜೇಶನಂ ॥ ೪೬ ॥*

ವ ॥ ಅಂತುಭಯ ಬಲಂಗಳೊಳಂ ವೀರ ಜನ ಜನಿತಾಳಾಪಂಗಳ್ ಸೆಗಟ್ಟಿ ವಿಕ್ರಮಾರ್ಜುನನನಂತನುಂ ತಾನುಂ ಜಲಕ್ಕನಿರೆ ಪಲ್ಲಂ ಸುಲಿದ್ದು ಪುಣ್ಯ ಪುಣ್ಯ ತೀರ್ಥೋದಕಂಗಳ ಮಿಂದು ಮಂಗಳವಸದನಂಗೊಂಡು ಸಾಮಾನ್ಯ ಯಜ್ಞಂಗೆಯ್ದು ಪಲವುಂ ತೆಱದ ಪಱಿಗಳಿಸಯೆ ನಾಂದೀ ಮುಖಮುಂ ನಿರ್ವರ್ತಿಸಿ ಶುಭ ಲಕ್ಷಣ ಲಕ್ಷಿತನುಂ ಸನ್ನಾಹ ಕರ್ಮ ನಿರ್ಮಿತನುಂ ಹಸ್ತಾಯುಧ ಕುಶಳನುಂ ಭದ್ರಮುನನುಮಪ್ಪ ವಿಜಯ

1 ಬೇಳೆ (ಕ.), ಬೆಳೆ (ಖ. ಗ. ಘ.).

* ೪೨ ನೆಯ ಪದ್ಯದಿಂದ ೪೬ ನೆಯ ಪದ್ಯದ ವರೆಗೆ ಎಲ್ಲ ಪ್ರತಿಗಳಲ್ಲಿಯೂ ಇರುವ ಆನುಪೂರ್ವಿಯು ಹೊಂದದಿರುವುದರಿಂದ ಇಲ್ಲಿ ಕೊಟ್ಟಿರುವಂತೆ ಪಾಠ ಕ್ರಮವನ್ನು ವ್ಯತ್ಯಾಸ ಮಾಡಿದೆ.

ಗಜಮುಮನಕ್ಷಯ ರಥಾಶ್ವ ಕೇತನ ಶರಾಸನ ಶರಧಿ ವಿಚಿತ್ರ
ವಿವಿಧಾಸ್ತ್ರ ಶಸ್ತ್ರಂಗಳುಮಂ ಗಂಧ ಧೂಪ ದೀಪಾದಿಗಳಿಂದರ್ಚಿಸಿ
ವಟ್ಟಾಗಳ್—

ಕಂ || ಬೆಳಗುವ ಸೊಡರ್ಗಳ ಬೆಳಗುಮ |
ನ್ನಿಳಿಸಿ ತೞತ್ತೞಿಸಿ ಪೊಳೆಯೆ ತಮ್ಮಯ ಬೆಳಗ ||
ಗ್ಗಳಿಸಿ ತೞತೞಿಸಿ ವಿದ್ಯು |
ದ್ವಿಳಸಿತಮೆನಿಸಿದುವು ನರನ ದಿವ್ಯಾಸ್ತ್ರಂಗಳ್

ಕಂ || ಸೊಡರ್ಗುಡಿಯ ಕೆಂಪಿನೊಳ್ ಕೆಂ |
ಪಿಡಿದಿರೆ ರಿಪು ನೃಪತಿ ಬಲದ ಶೋಣಿತ ಜಳಮಂ ||
ಕುಡಿಯದೆಯುಂ ದಲ್ ಮುನ್ನಮೆ |
ಕುಡಿದಂತೆಸೆದಿರ್ದುವರಿಗನಸ್ತ್ರಚಯಂಗಳ್ |

ವ || ಅಂತಾಯಿರುಳಂ ವಿಜಯಂ ವಿಜಯೋದ್ಯೋಗ
ಕಳೆಯೆ ಬೆಳಗಪ್ಪ ಜಾವದೊಳ್ ಬೀಡುವೀಡುಗಳ್ಗೆಲ್ಲಂ ತೊೞಲ್
ರೇೞಿಂ ಪಣ್ಣಿಮೆನೆ—

ಉ || ತಂಡದೆ ಕೀಱು ಸಾಱುವ ಪಲರ್ ಪಡೆವಳ್ಳರ ಮಾತುಗಳ್
ಗೊಂಡಿರೆ [1]ಸನ್ನಣಂದುಡುವ ಪಣ್ಣುವ ಬಾೞ್ತೆಯವಂದಿರಂ
ಳ್ಕೊಂಡವೊಲೂಳ್ವ ಬಗ್ಗಿಸುವ ಬೇಗದೊಳಾ ಕಟಕಂಗಳಿಂ
ಯ್ಕೊಂಡುವು ಮಂದರ ಕ್ಷುಭಿತ ದುಗ್ಧಪಯೋ[2]ಧಿ ಗಭೀರನಾ

ಚಂ || ಕೃತ ವಿವಿಧಾಸ್ತ್ರ ವೀರ ಭಟ ಕೋಟಿ ಭಯಂಕರಮಾಗೆ,
[3]ಬೀ
ವೃತಿಯ ಕಳಂಕ ಪಂಕದೊಳೆ ಪೆರ್ಚಿದ ಕಟ್ಟಲೆ ತೀವ್ರ ಶ

1 ಸನ್ನೆಗೊಂಡು (ಕ.) 2 ನಿಧಿ ಘೋ (ಕ.). 3 ಜೇಳಲಾ (ಕ).

ಹತ್ತಿಗಳ ದೀಪ್ತಿಯಿಂ ಬಿಸುಗೆಯಾಗಿ ಕರಂ ಪೊಗರ್ವಟ್ಟೆಗುರ್ವುಮಂ
ದ್ಭುತಮುಮನೀಯೆ ಪೆಣ್ಣಿದುವು ಪಾಂಡವ ಕೌರವ ರೌದ್ರ
ಸಾಧನಂ ॥ ೫೦ ॥

ವ॥ ಅಂತೆರಡುಂ ಪಡೆಗಳುಂ ಪಣ್ಣಿ ಪಣ್ಣಿನೆ ಪಣ್ಣಿ ಕಾಳೆಗಕ್ಕೆ ನಡೆಯಲೊಡರಿಸಿದಾಗಳ್—

ಕಂ॥ ಲೋಕೈಕ ಚಕ್ಷು ನವ ಕಮ।
ಲಾಕರ ಬಾಂಧವನನೇಕ ದಿತಿಸುತ ಸಮರಾ ॥
[1][ನೀ]ಕ ಭಯಂಕರನೆರಡುಮ।
ನೀಕಂಗಳನಡರೆ ನೋಡುವಂತುದಯಸಿದಂ ॥ ೫೧ ॥

ವ॥ ಆಗಳ್[2]ಜಿಸಿದ ಬಿಸುಗೆಗಳುಮಿಕ್ಕಿದ ಲೋಹವಕ್ಕರೆಗಳು ಮುರ್ಚಿದ ಮೊಗವಡಂಗಳುಂ ಕಟ್ಟಿದ ಪಟಿಯಿಗೆಗಳುಮೊ[3]ಟ್ಟಿದ ಮೂವತ್ತಿರಡಾಯುಧಂಗಳುಂಜೆರಸೆಜಿಂಕೆವೆರಸಿದ ಕುಲಗಿರಿಗಳೆ ತಳರ್ವಂತೆ ತಳರ್ವ ಮದಾಂಧ ಗಂಧ ಸಿಂಧುರಂಗಳುಮಂ, ಚಕ್ರ ಚೀತ್ಕೃತ ನಾದದೊಳ್ ದಿಕ್ಚಕ್ರ[4][ಮುಮಂ] ಚಕ್ರಘಾತದೊಳ್ ಧರಾಚಕ್ರಮುನಾಕ್ರಮಿಸಿ ನಿಶಾತ ಹೇತಿ ಗರ್ಭಂಗಳುಮನೇಕ ಪ್ರಕಾರ ಕೇತನ ವಾಜಿರಾಜಿಗಳುಮಾಗಿ [5]ದೊಮ್ಮಳಿಸಿ ನಡೆವ ರಥಂಗಳುಮಂ ಕಣ್ಣುಂ ಖುರಮುಂ ತೋಜಿ ಪಕ್ಕರೆಯಿಕ್ಕಿ ಪೊಳೆವ ಪೊನ್ನ ಪರ್ಯಾಣಂಗಳುಮೆಸಂಪೆ ಘೋಳಾಯ್ಲರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ ಮಿಡುಮಿಡುಕನೆ [6]ಮಿಡುಕುವ ಸಿಡಿಲೇಟಿಗ್ಗಿಯುಮಂ ಕೋಳ್ಮಸಗಿದ ಪುಲಿಯ ಪಿಂಡುಗಳುಮನನುಕರಿಸಿ ನಡೆವಣಿಯ ಸಂದಣಯುಮಂ ಕಾಟ್ಕುಜು ಮಸಗಿದಂತೆ ಮಸಗಿದ ದುರ್ಧರ ಧನುರ್ಧರ ಬಲಮುಮಂ ಕ್ಷೇತ ಭೀಷ್ಮರ ಪೇಟ್ಬೋಜೆಯೊಳೆರಡುಂ ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೊಡ್ಡಿ ನಿಂದಾಗಳ್—

1 ನೇ(ಕ. ಗ. ಘ.). 2 ಜಿಂದ (ಕ. ಗ.) 3 ಡ್ಡಿ (ಕ. ಗ.). 4 ಊರಂ (ಘ). 5 ಗೊಂದಳಿಸಿ (ಘ.) 6 ಪೊಡೆವ (ಕ.ಖ.ಗ.)

ಚಂ|| ಜಲ ಶಯನೋದರಾಂತರದಿನೀ ತ್ರಿಜಗಂ ಪೊಱಮಟ್ಟುದೀ
ಬುಲಿ, ಸಲೆ, ತಮ್ಮ ತಮ್ಮ ಶಿಬಿರಂಗಳಿನುಗ್ರ ಚತುರ್ಬಲಂಗ
ಪಲವುಮನೊಂದೆ ಮಾಡಿ, ಪೆಸೆಗಳ್ ಮ[1]ಸುಳಲ್ ನಡೆತಂದ
ರ್ಬಲದ[2]ಲರಾತಿನಾಯಕರುಮೊರ್ಬರನೊರ್ಬರಿ ಗೆಲ್ವ ತಕಿ

ವ|| ಆಗಳ್ ಕೌರವ ಬಲದ ಸೇನಾನಾಯಕಂ ಗಾಂಗೇ
ಮಾಗೆ ತನ್ನೊಡ್ಡಿದ ಮಕರ ವ್ಯೂಹದ ಮೊನೆಯೊಳ್ ಸುತ್ತಿ
ಪೊನ್ನ ತೊಳಪ ಪಱಿಯಿಗೆಗಳುಂ [3]ಮೆಱೆವ ಬೆಳ್ಳಿಯ ರಥಮುವ
ದೊಳೊಡಂಬಡೆ, ಪೂಡಿದ ಕುದುರೆಗಳುಂ, ಜೋಲ್ದ, ಪುರ್ವನೆತ್ತಿ
ಲಲಾಟ ಪಟ್ಟದೊಳಿಟ್ಟಳಮೊಪ್ಪುವ, ಬೀರವಟ್ಟಮುಮಸದಳ
ದಿವ್ಯ ಕವಚಮಂ, ತೊಟ್ಟು ಪರಶುರಾಮಂ ಬಾಳಿಗೆಂದು
ಕೋದಂಡಮಂ ಕೊಂಡು ಪಾಂಡವ ಬಲಮಂ ಮಾರ್ಕೊಂಡು
ಗಳ್ ಶ್ವೇತನುಮಾ ವ್ಯೂಹಕ್ಕೆ ಪ್ರತಿವ್ಯೂಹಮಾಗಿ ಸೂಚೀವ
ನೊಡ್ಡಿ ಕನಕ ಕವಚಾಲಂಕೃತ ಶರೀರನುಮಾರೂಢ ಸಮರ ರ
ಪಾರೂಢ, ಕನಕ ರಥನುಮಾಗಿ ಕೈಲಾಸವಾಸಿಗೆ ಪೊಡೆವಟ್ಟು
ಕೊಂಡು ಗಂಗಾಸುತಂಗದಿರದಿದಿರ್ಚಿ ನಿಂದಾಗಳ್—

ಕಂ|| ಶ್ವೇತನ, ಗಂಗಾಜಾತನ |
ಮಾತನೆ ಪಾರ್ದೆರಡುಮೊಡ್ಡಣಂ ಕಾದಲ್ಕೆಂ ||
ದೀ ತೆಱದಿನೊಡ್ಡಿ ನಿಂದುವು |
ಭೂತಳಮಳ್ಳಾಡೆ ಕೆಸಱ ಕಡಿತಪ ತೆಱದಿಂ

ವ || ಆಗಳ್ ಧರ್ಮಪುತ್ರಂ ಪುರುಷೋತ್ತಮನ
ನೋಡಿ ಕೌರವ ಬಲದೊಡ್ಡಣದ ನಾಯಕರಿವರಾರೆಂದು
ಮಕರ ಮಸ್ತಕಭೂಮಿಯೊಳ್ ಯುದ್ಧ ಸನ್ನದ್ಧನಾಗಿ—

1 ಸಗ (ಘ.). 2 ಧರಾಧಿ (ಕ.). ದರಾತಿ (ಖ. ಗ.). 3 ...
ಮೆಱೆದ (ಖ.), ಮೆಱೆದ (ಗ.).

ಕಂ|| ಕೆಂಬಣ್ಣದ ಕುದುರೆಗಳೊಳೊ |
ಡಂಬಡೆ ನಿಜ ರಜತ ರಥಮುಗು[1]ರ್ವುರ್ವರೆಯಂ ||
[2]ತಿಂಬೆ ಕಳಶಧ್ವಜಂ ಮಿಳಿ |
ರ್ದಂಬರಮಂ ಬಳಸೆ ನಿಂದನಾತಂ ದ್ರೋಣಂ || ೫೪ ||

ಕಂ|| ಆತನ ಸಾರೆ ಕಮಂಡಲು |
ಕೇತನಮಂಬರಮನಡರೆ ಚತುರಂಗ ಬಲೋ ||
ಪೇತನತಿ ಧವಳ ರಥನಭಿ |
ಜಾತಂ ಕ್ಷತ್ರಿಯರನುಱದ ಕಲಿ ಕೃಪನಾತಂ || ೫೫ ||

ವ|| ಮತ್ತಿತ್ತ ಗಾಂಗೇಯನ ದಕ್ಷಿಣೋಪಾಂತದೊಳ್ ಕರ್ಗನೆ
ರ್ಗಿದ ಸಮದ ಗಜ ಘಟಾಟೋಪದ ನಡುವೆ—

ಕಂ|| ಸರದದ ಮುಗಿ[4]ಲನೆ ಬಿಡದನು |
ಕರಿಸುವ ಧವಳಾಶ್ವದಿಂದಮೆಸೆದೊಪ್ಪುವ ಲೋ ||
ಹ ರಥಮದು ಪುಲಿಯ ಪಟಿಯಿಗೆ |
ವೆರಸು ತಟಿತ್ತುಱಿಸೆ ನಿಂದನಾತಂ ಶಲ್ಯಂ || ೫೬ ||

ವ|| ಮತ್ತಿತ್ತ ಗಂಗಾಸುತನ ವಾಮಭಾಗದೊಳಂಬರ ಭಾಗಮಂ
ಟ್ಟಮೆಡಱಿದಂತಾಗಿ ತನ್ನ ರಥದೊಳೊಟ್ಟಿದ ಕೆಯ್ದುಗಳ ಬೆಳಗೆ
ರಗಾಗೆ—

ಕಂ|| ಕಱು[3] ಕೊರಲೊಳ್ ಕಣ್ಣೊಸಲೊಳ್ |
ಪೆಱು[3] ಮಕುಟದೊಳುಗ್ರ ಧನು ಕರಾಗ್ರದೊಳಿರೆ[5]ಯ ||
ಳ್ಕೆಱಿಯೆ ಹರಿಕೇತು ನಭದೊಳ್ |
ಮಿಱುಗುವ ಚೆಂಬೊನ್ನ ರಥದನಶ್ವತ್ಥಾಮಂ || ೫೭ ||

---

1 ರ್ವರಿಯಣೆಯಂ (ಕ.), ರ್ವರೆಯಂ (ಖ. ಗ.) 2 ತುಂ (ಘ.). 3 ಗಸಿತ
. ಘ.), ಗಂಸಿತ (ಗ.). 4 ಲೆ (ಖ. ಗ. ಘ.) 5 ದ (ಖ. ಗ. ಘ.).

ವ|| ಆ ರುದ್ರಾವತಾರನ ಕೆಲದೊಳ್ ಕಿಕ್ಕಿಱಿಗಿಱಿದ ತೇ
ಱುಗಲ ನಡುವೆ ಪೊನ್ನ ರಥಮನೇಱಿ ನಿಂದಂ ಭೂರಿಶ್ರವಸ
ಕೆಲದೊಳ್ [1]ಬಾಳ ಬಟ್ಟಂ ತೂಂತಿಟ್ಟಂತೆ ಸಂದಣಿಸಿ ನಿಂದ ಗ
ಕುಮಾರರಣಿಯ ನಡುವೆ ಪೊನ್ನ ರಥಮನೇಱಿ ನಿಂದಾತನೆನ್ನ ತ
ಕೃತವರ್ಮನಾತನ ಕೆಲದೊಳೊಂದಕ್ಷೋಹಿಣೀ ಬಲಂಬೆರಸು ಸುತ್ತಿ
ಕನಕ ದಂಡ ಮಂಡಿತ ವಿಚಿತ್ರಾತಪತ್ರಂಗಳ ನಡುವೆ ಮಣಿಮ
ಮರೀಚಿಗಳ್ ಪೊಳೆಯೆ ನಾನಾ ವಾಹನಂಗಳನೇಱಿ ನಿಂದರ್
ತ್ರೈನ ಕಾಂಭೋಜ ಸುದಕ್ಷಿಣ ದಂ[2]ಡಧಾರ ಶ[3]ತದಂಡ ಧರ
ಕೆಲದೊಳ್ ನೀಳ ಶ್ರುತಾಯುಧ ನಿಯುತಾಯುಧಾಚ್ಯುತಾಯುಧ
ವರ ಕೆಲದೊಳ್ [4]ನಿಲೆ ಬಲದ ಸೆ[5]ಱಿಕೋಲೊಳೊಂದಕ್ಷೋಹಿಣೀ
ಬೆರಸುಮಯ್ವತ್ತು ಸಾಸಿರ ಮದದಾನೆವೆರಸು ನಿಂದಂ ಸುಯೋಧನನ
ಮಯ್ದುನಂ ಸಿಂಧು ದೇಶಾಧೀಶ್ವರಂ ಜಯದ್ರಥನಾತನ ಕೆಲದ
ಮಕರ ಮಸ್ತಕ ಭೂಮಿಯೊಳ್ ಕರಟತಟಗಳಿತ ಮದ ಜಳ ಧಾರಾ
ಪರಿಪ್ಲಾವಿತ ಸಕಳ ಭೂತಳಮಪ್ಪ ನಾಲ್ಕು ಲಕ್ಕ ಭದ್ರಹಸ್ತಿಯ
ನೊಂದುಮಾಡಿ ಘಟೆಯ ಮೊನೆಯೊಳ್ ದಿಗ್ಗಜೇಂದ್ರಮೆನಿಸಿದ ಸುಪ್ರ
ಗಜೇಂದ್ರಮನೇಱಿ ನಿಂದಾತನಿಂದ್ರನ ಕೆಳೆಯಂ ಭಗದತ್ತನಾತನ ಕೆ
ಳೊಂದು ಲಕ್ಕ ಕುದುರೆಯುಮಱುವತ್ತು ಸಾಸಿರ ರಥಮುಮೊಂದ
ಹಿಣಿಯ ಕಾಲಾಳ್ವೆರಸು ನಿಂದರ್ ಸೋಮದತ್ತ ಬಾಹ್ಲೀಕ
ಕೆಲದೊಳ್ ದೇವೇಂದ್ರಂಗೆ ಪಗೆವರಾಗಿ ವಿಕ್ರಮಾರ್ಜುನನ ಕೆಯ್ಯೆ
ಸತ್ತ ನಿವಾತಕವಚ ಕಾಳಕೇಯ ಪೌಳೋಮ ತಳತಾಳುಕರೆಂಬ ದೈ
ವೃದ್ಧ ವೈರಮಂ ನೆನೆದು ತ್ರಿಗರ್ತಾಧೀಶ ಸುಶರ್ಮ ಪ್ರಭೃತಿಗ
ಸಂಸಪ್ತಕರುಮಾಗಿ ಪುಟ್ಟಿ ಮೂಱುಕೋಟಿಯುಮಱುವತ್ತು ಸ
ದೈತ್ಯ ಪ್ರಧಾನ ನಾಯಕರುಮರ್ಜುನನೊಳ್ ಕಾದುವ ಬ
ದುರ್ಯೋಧನನೊಳ್ ಬೇಡಿ ಪಡೆದು ಪದಿನೆಂಟುಕೋಟಿ ರಥಂಬ
ಬೇಱೊಡ್ಡಿ ನಿಂದರ್ ಮತ್ತಿತ್ತ ಚತುರಂಗಬಳ ಜಳನಿಧಿಯ ನ

---

1 ಚಾಳ ಪಟಂ (ಖ.). 2 ತದಾ (ಖ. ಗ. ಘ.). 3 ತು (ಖ.
(ಗ. ಘ.). 4 ಬರೆ (ಕ. ಖ. ಗ.). 5 ರಕೊಲೊ (ಖ. ಗ.), ಱಕಮೊ (

ಂಗರಾಜ ವಂಗ ಕೊಂಗ ದೇಶಾಧೀಶ್ವರರೆಣ್ಬತ್ತು ಸಾಸಿರ ಗಜ ಘಟೆ[1]
ಂ ಮೂಱು ಲಕ್ಕ ರಥಮುಮಱುವತ್ತು ಕೋಟಿ ಪದಾತಿಯುಂ
ಸು ನಿಂದರ್ ಮತ್ತಂ ಕ್ಷೇಮಧೂರ್ತಿಯುಂ ಭೀಮಸೇನನ ಕೆಯ್ಯೊಳ್
ಬಕಾಸುರ ಜಟಾಸುರನ ಮಕ್ಕಳಳಂಭೂಷ ಹಲಾಯುಧ
ಸಲಾಯುಧ ಕಾಳ ನೀಳ ಪ್ರಮುಖ ರೂಕ್ಷರಾಕ್ಷಸ ಬಲಂಬೆರಸು
ತ್ರಿಱಿದು ಬಳಸಿಯುಮಿರೆ ದುಶ್ಶಾಸನಂ ಮೊದಲಾಗೆ ನೂರ್ವರ್
ಮ್ಮಂದಿರುಂ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಮಱುವತ್ತು
ಸಿರ ರಥಮುಂ ಪದಿನೆಂಟು ಸಾಸಿರ ಮದಾಂಧ ಗಂಧ ಸಿಂಧುರಂಗಳುಂ
ಸು ಪೊಯ್ವ ಪಂಚಮಹಾಶಬ್ದಂಗಳ್ ಕಾಳ ನೀಳ ಜಳಧರಂಗಳ್
ಱಿಗುವಂತೆ ಮೊಱಗೆ ಗಗನತಳಂ ತಳಿರ್ತಂತೆ ಪೊಳೆದು ಮಿಳಿರ್ವ ಪಾಳಿ
ಕಾಧ್ವಜಂಗಳುಂ ಗಗನ ಸಿಂಧು ಫೇನ ಪಟಳ ಶಂಖ ಸಂಕಾಶ ಪಾಂಡು
ಚಾಮರಂಗಳುಂ ಪೆಱವುಂ ರಾಜ ಚಿಹ್ನಂಗಳುಮೆಸೆಯೆ—

। ಕನಕ ಗಿರೀಂದ್ರ ರುಂದ್ರ ಶಿಖರಸ್ಥಿತ ಬಾಳ ದಿನೇಶ ಬಿಂಬಮಂ।
ನೆನೆಯಿಸೆ ತನ್ನ ಪೊನ್ನ ರಥದೊಳ್ ನೆಲಸಿರ್ದು ವಿಳಾಸದಿಂದೆ
ಭೀ ॥
ಮನ ಮೊನೆಯಂ ವನೀಪಕರನಾರಯಲಟ್ಟಿ ಯುಗಾಂತ ವಾರ್ಧಿ
ಘೋಂ।
ಕೆನೆ ತಳರ್ವಂದದಿಂ ತಳರಲಟ್ಟಿಪನಲ್ತೆ ಫಣೀಂದ್ರ ಕೇತನಂ
॥ ೫೮ ॥

ಕಂ॥ ಸೆಱೆಕೋಲ್ ಸೆಱೆಕೋಲಿಂ ಪ
ತ್ತುಱುಗಾವುದ ಬಲದ ಪವಣನನಿತ್ತಿನಿತೆಂದಾ ॥
ನಱಿಯೆಂ ದೇವಾಸುರರೊಳ।
ಮೞಿಯೆಂ ಕಂಡಿನಿತು ಬಲಮನಾನವನಿಪತೀ ॥ ೫೯ ॥

ವ॥ ಎಂದು ನಾಮುಂ ನಮ್ಮ ಬಲದ ನಾಯಕರನೆಡೆಯಱಿ
ಟ್ಟುವಮೆಂದು ದ್ರೋಣನ ಮೊನೆಗಱುವತ್ತು ಸಾಸಿರ ರಥಂಬೆರಸು

1 ಟಾಟೋಪಂ (ಕ. ಖ. ಗ.).

ಧೃಷ್ಟದ್ಯುಮ್ನನುಮಶ್ವತ್ಥಾಮನ ಮೊನೆಗೆ ನಾಲ್ವತ್ತು ಸಾಸಿ
ಬೆರಸು ಶಿಖಂಡಿಯುಮಂ ಕೃತವರ್ಮನ ಮೊನೆಗೊಂದಕ್ಷೋಹಿಣೀ
ಬೆರಸು ಸಾತ್ಯಕಿಯುಮಂ ದುರ್ಯೋಧನನ ಮೊನೆಗೊಂದು ಕೋ
ಮುಮೊಂದು ಲಕ್ಕ ಭದ್ರಹಸ್ತಿಯುಂ ಬೆರಸು ಭೀಮನುಮಂ ಬೃ
ಮೊನೆಗೆ ಮೂವತ್ತು ಸಾಸಿರ ರಥಂಬೆರಸಭಿಮನ್ಯುವುಮಂ ದುಶ
ಮೊನೆಗೆ ನಾಲ್ವತ್ತು ಸಾಸಿರ ರಥಂಬೆರಸು ನಕುಲನುಮಂ ಶಕುನಿ
ನೆಗೆ ನಾಲ್ವತ್ತು ಸಾಸಿರ ರಥಂಬೆರಸು ಸಹದೇವನುಮಂ ಕೃಪನ
ಗೊಂದಕ್ಷೋಹಿಣೀ ಬಲಂಬೆರಸು ಕೇಕಯರುಮಂ ಸಿಂಧುರಾಜನ
ಗೊಂದಕ್ಷೋಹಿಣೀ ಬಲಂಬೆರಸು ದ್ರುಪದನುಮಂ ಭಗದತ್ತನಮೊ
ದಕ್ಷೋಹಿಣೀ ಬಲಂಬೆರಸು ವಿರಾಟನುಮಂ ಜಟಾಸುರ ಬಕಾಸುರ
ಆಳಂಭೂಷ ಹಳಾಯುಧ ಮುಸಳಾಯುಧ ಕಾಳ ನೀಳ ನಕ್ತಂಚರ
ಗೊಂದಕ್ಷೋಹಿಣೀ ಬಲಂಬೆರಸು ಘಟೋತ್ಕಚನುಮಂ ವಿಂದನ
ಪದಿನೆಂಟು ಸಾಸಿರ ರಥಮುಮೊಂದುಲಕ್ಕ ಮದದಾನೆಯು
ಕೊಂತಿಯ ಮಾವನಪ್ಪ ಕೊಂತಿಭೋಜನುಮಂ ವಿಂದಾನುವಿಂದ
ಗಱುವತ್ತು ಸಾಸಿರ ರಥಂಬೆರಸು ನಾಗಕುಮಾರನನಂತಬಲ
ತನಿಳಾವಂತನುಮಂ ಭೂರಿಶ್ರವನ ಮೊನೆಗೆ ನಾಲ್ವತ್ತು ಸಾಸಿರ
ನಾಲ್ವತ್ತು ಸಾಸಿರ ಮದಹಸ್ತಿಗಳುಂ ಬೆರಸು ಮದಗಜಾರೂಢನ
ಮಂ ಸುಯೋಧನನ ಮಕ್ಕಳ್ ಲಕ್ಕಣಂ ಮೊದಲಾಗೆ ನೂರ್ವ
ಗಱುವತ್ತು ಸಾಸಿರ ರಥಂಬೆರಸು ಸುತ ಸೋಮಕ ಪ್ರಮುಖರಪ್ಪ
ಪಾಂಡವರುಮಂ ಪೇೞ್ದು ಕಾಂಭೋಜ ಸುದಕ್ಷಿಣ ದಂಡಧ
ಮೂವರಕ್ಷೋಹಿಣೀಪತಿಗಳ ಮೊನೆಗೆ ಮೂಱುಕೋಟಿ ರಥ
ಪಾಂಡ್ಯ ಶ್ರೀಜಯ ಸೋಮಕರಂ ಪೇೞ್ದು ವೀರ ಪುಷ್ಕರ ಪಾ
ಬರ್ಬರ ಶಬರ ನೇಪಾಳ ಮಹೀಪಾಳರ ಮೊನೆಗೆರಡು ಕೋಟಿ ರಥ
ಹೈಹಯರಂ ಪೇೞ್ದು ನೀಳನನಱುವತ್ತು ಸಾಸಿರ ಭದ್ರಹಸ್ತಿವೆರಸ
ಚಕ್ರ ರಕ್ಷೆಗೆ ಪೇೞ್ದು ಸಂಸಪ್ತಕರ ಪದಿನೆಂಟುಕೋಟಿ ರಥಕ್ಕಂಕೆ
ರಥಮನೊಂದನೆ ಪೇೞ್ದು ಯುಧಿಷ್ಠಿರಂ ಶಲ್ಯನ ಮೊನೆಗೆ ನೆಱಿ
ಕೆಯ್ಸೈಸುವಾಪ್ರಸ್ತಾವದೊಳ್ 'ಶೂರಂ ಭೀರೀನ ಯೋಜ
ಎಂಬ ನಯಮಂ ಕೆಯ್ಕೊಂಡು ವಿನಯಮನೆ ಮುಂದಿಟ್ಟು—

ಕಂ|| ಬಳಮೆರಡುಂ ತನ್ನನೆ ಮಿಳ |
ಮಿಳ ನೋಡೆ ನರೇಂದ್ರನೊಂದೆ ರಥದಿಂದಸಹ್ಯ ||
ಪ್ಬಳಮನಿರದೆಯ್ದಿ ಭೀಷ್ಮರ |
ಚಳಣ ಯುಗಕ್ಕೆಱಗೆ ನಿನಗೆ ಜಯಮಕ್ಕೆಂದಂ || ೬೦ ||

ವ|| ಎಂದು ಭೀಷ್ಮರ್ ತಮ್ಮ [1][ಮೊ]ಮ್ಮನ ವಿನಯಕ್ಕೆ ಮೆಚ್ಚಿ ಪರಕೆಯಂ ಕೆಯ್ಕೊಂಡು—

ಕಂ|| ಗುರು ಕೃಪ [2][ಗುರುಸುತ] ಶಲ್ಯರ |
ಚರಣಂಗಳ್ಗೆಱಗಿ ಪೋಗಿ ಪೊಡೆವಡುವುದುಮಾ ||
[3][ದರದಿಂದಂ ನಲ್ಮೆಯೊಳಂ]
ಪರಸಿ ಮನಂಗೊಂಡು ನುಡಿದರವರಾ ನೃಪನಂ || ೬೧ ||*
ನಿನ್ನ ಬರವಿಂದಮೆಮ್ಮ ಮ |
ನನ್ನಿನಗೆಱಗಿದುದು ಜಯಮುಮೆಮ್ಮೀ ದೆಸೆಯಿಂ ||
ದನ್ನಿನಗೆ ಸಾರ್ಗೆ ಪೋಗೆನೆ |
ಮನ್ನಿಸಿ ಗುರುಜನಮನಾಗಳಂತಕ ತನಯಂ || ೬೨ ||

ವ || ಮಗುಳ್ದು ತನ್ನೊಡ್ಡಣಕ್ಕೆ ಬರುತ್ತುಂ ದುರ್ಯೋಧನನ ನಪ್ಪ ಯುಯುತ್ಸುವಂ ಕಂಡು—

ಪವನಜನಿಂದೆ ಕೌರವ [4]ಕುಲಂ ಪಡಲಿಟ್ಟವೊಲಕ್ಕುಮಾದೊಡಿ |
ನ್ನವರವರಾರುಮಿಲ್ಲಣಮೆ ಸಂತತಿ ಕೆಟ್ಟಪುದಿಲ್ಲಿ ಕಾವೆನೀ ||
ಬವರದೊಳೀಗಳಾನಿವನನೆಂದು ನೃಪಂ ದಯೆಯಿಂದಮಾ
ಯುಯು |
ತ್ಸುವನೊಡಗೊಂಡುಬಂದನೆನಿತಾದೊಡಮೇಂ ಪ್ರಭು ಪೊಲ್ಲ
ಕೆಯ್ಗುಮೇ || ೬೩ ||

1 ತಮ್ಮನ ಪೌತ್ರನ (ಕ.). ತಮ್ಮನ (ಖ. ಗ. ಘ.). 2 ನದೀಜ (ಘ).
3 ...ದೆ ನಲುಮೆಯೊಳ್ ನಲವಿಸಿ (ಘ.). 4 ಬ (ಕ. ಖ. ಗ. ಘ.)
* ಈ ಪದ್ಯವು ಕ. ಖ. ಗ. ಪ್ರತಿಗಳಲ್ಲಿ ಬೇರೆ ವಿಧವಾಗಿದೆ.

ವ || ಅಂತಾ ಯುಯುತ್ಸುವನೊಡಗೊಂಡುಬಂದು ಧನು
ನುತ್ಸಾಹದೊಳಿರ್ಪ ಪದದೊಳ್ ವಿಕ್ರಮಾರ್ಜುನನ ಮನದ
ವ್ಯಾಮೋಹಮಂ ಕಳೆಯಲೆಂದು ಮುಕುಂದಂ ದಿವ್ಯಸ್ವರೂ
ತೋಱಿ—

ಚಂ|| ಅದಿರದಿದಿರ್ಚಿ ತಳ್ತಿಱಿಯಲೀ ಮಲೆಪೊಕ್ಕಿದ ಚಾತುರಂಗ
ಬುದು ನಿನಗೊಡ್ಡಿ ನಿಂದುದಿದನೋವದೆ ಕೊಲ್ವಡೆ ನೀನುಮ
ಜ್ಜದೊಳೆಸಗೆಂದು [1]ಸೈತಜಿತನಾದಿಯ ವೇದ ರಹಸ್ಯದೊಳ್
ತದ[ಪರಿಚರ್ಯೆಯಿಂ] ನೆಱೆಯೆ ಯೋಜಿಸಿದಂ ಕಪನತ್ರಿಣ
||

ವ ||ಆಗಳ್ ಪರಸೈನ್ಯಭೈರವಂ ಪುರಾಣ ಪುರುಷನಪ್ಪ
ಷೋತ್ತಮಂಗೆಱಗಿ ಪೊಡಮಟ್ಟು ರಿಪುಪಕ್ಷಕ್ಷಯಕರಮಪ್ಪ ವಿಶ್ವ
ನಿರ್ಮಿತಮಾದ ತನ್ನ ದಿವ್ಯರಥಮಂ ಮನೋರಥಂಬೆರಸು [2]ರಥಾ
ನಂ ಮುನ್ನಮೇಱಲ್ವೇೞ್ದು ಮೂಱು ಸೂೞ್ ಬಲವಂದು ಪೊಡ
ಬೞಿಯಂ ತಾನೇಱಿ ವಜ್ರಕವಚಮಂ ತೊಟ್ಟು ತವಮ
ನೆರಡುಂ ದೆಸೆಯೊಳಂ ಬಿಗಿದು ದ್ರೋಣಾಚಾರ್ಯಂಗೆ ಮನ
ನಮಸ್ಕಾರಂಗೆಯ್ದು ದ್ರೋಣಂ ಬಾೞ್ಗೆಂದು ಮಹಾ ಪ್ರಚಂಡ ಗ
ವಮಂ ಕೊಂಡೇಱಿಸಿ ನೀವಿ ಜೇವೊಡೆದು ದೇವದತ್ತ ಶಂಖಮಂ
ಸಂಸಪ್ತಕಬಲಕ್ಕಣದತ್ತ ರಥಾಂಗ ಧರನಂ ರಥಮಂ ಚೋದಿಸಲ್ವೆ
ಗಳ್—

ಮ || ಸ್ರ|| ಕುಳಶೈಲೇಂದ್ರಂಗಳಂಭೋನಿಧಿಗಳಖಿಳ ದಿಗ್ದಂತಿಗಳ
ಧ
ವಳಯಂ ಪಾತಾಳ ಮೂಲಂ ಸಕಲ ಭುವನಮೊಂ
ಱೊಳ್ ಕೇ[3]ಣಿಗೊ

1 ತೈ (ಖ. ಗ. ಘ.). 2 ಮುರಾಂತಕ (ಕ. ಖ. ಗ.). 3 ಳಿ (ಖ. ಘ

ಜ್ಚಳಿಸಲ್ ಸೂಸಲ್ ಪಳಂಚಲ್ ಸಿಡಿದೊಡೆದಳಱಲ್
ಪಾಱಿ ಜೀಱೇಱಲೆಂದು ।
ಮ್ಮಳಿಸುತ್ತತ್ತಿರ್ದರಾವಂ ಹರಿಗನೊಳಿದಿರಂ ಮೀಱಿ
ಮಾಱಾಂಪ ಗಂಡಂ ॥ ೬೫ ॥

ವ॥ ಎಂಬನ್ನೆಗಂ ಪ್ರಳಯ ಕಾಲ ಜಾತೋತ್ಪಾತ ವಾತ ನಿರ್ಘಾತ
ನ್ಮುಳ್ವಾಡಿ ತಳ್ಳಂಕಂಗುಟ್ಟುವ ಜಳನಿಧಿಗಳಂತೆ ಮೇರೆದಪ್ಪಲ್ ಬಗೆ
ಯ ಸೈನ್ಯಂಗಳಂ ಕಂಡತ್ತ ರಾಜರಾಜನುಮಿತ್ತ ಧರ್ಮರಾಜನು
ನೊಡನೆ ಕೆಯ್ವೀಸಿದಾಗಳ್—

ಕಂ॥ ಪೂರ್ವಾಪರ ಜಳನಿಧಿಗಳ ।
ಗುರ್ವಿಸುವಿನವೊಂದನೊಂದು ತಾಗುವವೊಲಗು ।
ರ್ವುರ್ವಿರೆ ಪರ್ವಿ ಚತುರ್ಬಲ ।
[2]ಮೇರ್ವೆಸದಿಂದಂದು ಬಂದು ತಾಗಿತ್ತಾಗಳ್ ॥ ೬೬ ॥

ಘಟಿಯ ದಱದುಲಿವು ಲಯ ಘನ ।
ಘಟಿಗಳ ಮೊಱಗೆನಿಸೆ ಪೊಟ್ಟಗೊಡೆದತ್ತು ರಟ ॥
ತ್ಪಟು ಪಟಹ ಶಂಖ ಭೇ[3]ರಿಯ ।
ಚಟುಳಿತದಿಂದಟಳ ಪಟಳಮಂಬರ ಪಟಳಂ ॥ ೬೭ ॥

ಕರಿ ತುರಗ ರಥ ಪದಾತಿಯ ।
ಚರಣಾಸಂಘಾತ ಜಾತ ರಜಮಾಜಸ್ರಂ ॥
ನೆರೆದಂಬರ[4]ಕೊಗೆಯಲ್ ಬಳ ।
ಭರದಿಂ ಧರೆಯೆಟ್ಟು ಪಾಱುವಂತಾಯ್ತಾಗಳ್ ॥ ೬೮ ॥

ಸಮರ ರಸಪ್ರಿಯರೊಳ್ ಸ ।
ತ್ತ್ವಮುಮಿಳೆಯೊಳ್ ರಜಮುಮೊದವೆ ರಣಗಟ್ಟ್ತಲೆ
ಯೊಳ್ ॥

1 ದು (ಕ.). 2 ಮೊರ್ವೆಸದಿಂ ಬಂದು ತಾಗ ತೊಡಗಿ (ಕ.) 3 ರೀ । ತಟ ರವ
ರಿಯು । . . . ರವ (ಖ. ಗ.). 4 ತಳಮನಡರೆ । ಭರದಿಂ ಕಿಱತ್ತಿ (ಕ.ಖ.ಗ.).

ತನುಮುಂ ಮಿಗೆ ಸತ್ತ್ವ ರಜ।
ಸ್ತಮಂಗ[1]ಳುಂ ಕಾಣಲಾದುವೆರಡುಂ ಪಡೆಯೊಳ್ ॥ ೬

ಕಂ॥ ಪಡೆಯ ಪೊಱ[3]ಗಗಿದು ಕೇಷಂ।
ಪೆಡೆಗಳನುಡುಗುವುದುಮಿಳೆ ಜೊದಿಲ್ಲೆನೆ ಬಿಟ್ಟ ॥
ತ್ತಡೆಗಿಡೆ ಕೂರ್ಮನ ಬೆನ್ನಂ।
ದೊಡೆದು ಸಿಡಿಲ್ದೊಡನೆ ನುಚ್ಚು ನೂಱಪ್ಪಿನೆಗಂ ॥ ೭೦

ವ॥ ಅಂತು ನೆಲಸುಮಾಕಾಶಮೊಂದೊಂದಱೊಳ್ ತಾಗಿದ ಬ
ದೊಳಂಬರಂಬರಂ ನೆಗೆದ ಧೂಳಿಯೊಳ್ ದೆಸೆಯಱಿಯದೆಯುಂ ತ
ಬಲಮುಂ ಮಾರ್ವಲಮುನಱಿಯದೆಯುಂ ಚಾತುರ್ವಲಂಗಳ್ ಮೊ
ಸಮುಕಟ್ಟುಗೆಟ್ಟು ತಡವರಿಸಿ ತಟ್ಟು ಪೊಟ್ಟೆಂದೆಚ್ಚುಮಿಟ್ಟುಮಿಱಿ
[2]ತಱಿದು ಘಟ್ಟಿಸೆಯುಮಾಂಕೆಗೊಂಡು ಕಿಱಿದು ಪೊಱ್ತುಕಾದೆಕ
ಸುರಿವ ಬಿಸುನೆತ್ತರ ಸರಿಯೊಳಮಂಬಿನ ಸರಿಯೊಳಮುಂಬಿರಿವಿಟ್ಟು ಪಾ
ಮದಗಜಂಗಳ ಮದಜಲದೊಳಂ ಬಲದ ಕಳಕಳಕ್ಕೆ ಮಸಗಿ ದೆಸೆಯ
ಯದೆಯುಂ ಪಱಿಯೆ ಘಟ್ಟಿಸಿದ ಕೀಳ ಘಟ್ಟಣೆಯೊಳ್ ಪೊಟ್ಟಗೊಂ
ತಾಳುಗೆಗಳ ರುಧಿರ ಜಲದೊಳ್ ಬೆರಸಿ ಪದಗೆಂಪನಾಳ್ದ ಜಾತ್ಯಶ್ವ
ಲಾಳಾ ಜಳದೊಳಂ ನೆಲದೊಳೊಗೆವ ರಜಂ ಮೊದಲ್ಮೊಲಂಗಿಡೆಯ
ತಿಱಿದಿಕ್ಕಿದಂತೆ ತಲೆಗಳ್ [3]ಪಱಿದುರುಳ್ದೊಡೆ ಪೆರ್ಮರಂಗಳ ಪೋ
ಳೊಳಗಣಿಂದಮೊಗೆದ ಕೇಸುರಿಗಳ ಬಳಗದಂತಟ್ಟೆಗಳಿಂದಂಬರಂಬ
ನೆಗೆದು ಪಾಱುವ ನೆತ್ತರ ಸುಟ್ಟುರೆಗಳಿಂದಂ ಮೇಗೆ ನೆಗೆದ ರಜಂ ಮುಸ
ನಾಗೆ ದೆಸೆಯಱಿದು ತಮ್ಮ ಬಲಮುಮಂ ಮಾರ್ವಲಮುಮನಱಿ
ನವರುಧಿರ ಜಳ ಚಳ [4][ತ್ಸೇಚನ]ದೊಳ್ [5]ಘಟ್ಟಿಸಿ ಸಿಂ[6]ದುರದೊ
ನೆಲಗಟ್ಟಿಸಿದಂತಿರ್ದ ರಂಗಭೂಮಿಯೊಳೆರಡುಂ ಪಡೆಯ ನಾಯಕ
ಬಿಲ್ಗಾಳೆಗಂಗಾದುವಾಗಳ್—

1 ಳಂ (ಕ. ಖ. ಗ.). 2 ಘಡಿಸೆ (ಕ. ಗ.). 3 ಮು (ಕ.). 4 ತ್ಪಾಟ
(ಕ. ಖ.), ಛಾಟಳ (ಗ.), ಛಾಟಱ (ಘ.). 5 ಪು (ಕ.ಖ), ಪ (ಗ.). 6
(ಕ. ಖ. ಘ.).

ಕಂ || ಪಿಡಿಕೆಯ್ ತೀವಿದ ಕೂರ್ಗಣೆ |
ಮಡಕಾಲ್ಪರಮಲೆವ ಕಚ್ಚೆ ನಿಡಿಯಸಿಯೊಱ ಕ ||
ರ್ಪಿಡಿದ ಪಣೆಗಟ್ಟು ಕೆಯ್ಪೊಡೆ |
ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್ || ೭೧ ||

ಶರ ಸಂಧಾನಂ ನಿಟ್ಟಿಸ |
ಲರಿದೆಂಬಿನಮೆರಡು ಬಲದ ಕಡುವಿಲ್ಲರ್ ಭೋ ||
ರ್ಗರೆದಿಸೆ ಕೂರ್ಗಣೆಯೊಳ್ ಪಂ |
ದರಿಕ್ಕಿದಂತಾಯ್ತು ಗಗನ·ಮಂಡಳಮೆಲ್ಲಂ || ೭೨ ||

[1]ಗಱ ಸನ್ನೆಗೆಯ್ದು ತೆಗೆನೆಱ |
ದೆಱಗಿ ಪರಂಕ[2]ಲಿಸಿ ಪರ್ವಿ ಕೂಕಿಱದಿಸೆ ಕೆಂ ||
ಗಱಿಯ ಮೊನೆಯಂಬುಗಳ್ ಕ |
ಣ್ದೆಱೆಯಿಸಿದುವು ಪೊಣರ್ವ ಬಿಲ್ಲ ಕಡುವಿತ್ತಿಗರಂ || ೭೩ ||

ಅರಿವ ನಡುವುಡಿವ ನೇರ್ಗೋ |
ಲ್ಪರಿದುರ್ಚುವ ನಟ್ಟು ತೊನೆವ ಕಣೆಗಳ್ಗೆ ಮೊಗಂ ||
ದಿರಿಯದಿದಿರಿದಿರನದಿರದೆ |
[3][ಸು]ರಿಗಿಱವಂತೆಚ್ಚರಂಬನಂಬಟ್ಟುವಿನಂ || ೭೪ ||

ಪಿಡಿಕೆಯ್ಯ ದೊಣೆಯ ಪೊದೆಯುಂ |
[4][ಬಿಡೆ ಮುಡಿ]ವಿನಮೆಚ್ಚು ಸುರಿಗೆಗಿಱ್ದಿದಿರಿದಿರಂ ||
ಪಡೆ ಪೆಣೆದಿಱದುಂ ಬಿಲ್ವಡೆ |
ಪಡೆದುದು ಭೋರ್ಗರೆದು ಪರಿವ ನೆತ್ತರ ಕಡಲಂ || ೭೫ ||

ವ || ಅಂತುಭಯಬಲ ಧನುರ್ಧರ ಬಲಂಗಳುಮಱ್ಗಿ ಮಱ್ಗಿ
ಳ್—

1 ನೆಱ (ಕ. ಖ.). 2 ವಿ (ಕ.) 3 ಸ (ಕ. ಖ. ಘ.). 4 ಜೊದವು
(ಕ. ಖ. ಗ.) ಬೊದವುವಿನಂದೆ (ಘ.)

ಚಂ|| ತೊಳಗುವ ಬಾಳ್ ತಟಿತ್ತ್ತಱಿಪ ಕಕ್ಕಡೆ ಬುಂಭುಕಮೊ
ತಗು
ಜ್ವಳಿಸುವ ಪಂಚರಾಯುಧಮುಗುರ್ವಿಸುವಾವೃತಿ ಪ್ರೊಸಿ
ಟ್ಟಳಮುಮದಿರ್ದ ಮಾಳಜಿಗೆ ಪಕ್ಕರೆಯಿಕ್ಕಿದ [1]ಜಾಯಿಲ
ಗೊಳಿಸೆ ಕಡಂಗಿ ತಾಗಿದುದಸುಂಗೊಳೆ ತುಂಗ ತುರಂಗ ಸ

ವ|| ಅಂತು ವಿಳಂಬ ಕಾಳದ ಕಾಲ್ಕಿರ್ಚಿನ ಬೇಗೆ ಸಾರ್ವ
ಪಳವುಂ ಕಿರ್ಚುಂ ಕಿಡಿಯುಮಾಗೆ ತಾಗಿದಾಗಳ್——

ಚಂ|| ಪಸುಗೆ ನೆಲಂ ಜಲಂ ಹಯಮೊಡಂಬಡು ಪಂಚನೆ ಕೇಣ
[2]ಕೊಸೆ ಪೆಸೆ ದಿಟ್ಟಿ ಮುಟ್ಟಿ ಕೆಲಜಂಕೆ ನಿವರ್ತನೆ ಕಾಣ್ಕೆ ಪ
ರ್ವಸನದೊಳಾವ ಬಲ್ಮೆಯೊಳೊಡಂಬಡೆ ತಳ್ತಿಱಿವಲ್ಲಿ ವಿ
ಮುಸು[3]ಕಿದ ಮಾಱ್ಕೆಯಾಯ್ತು ಸಮರಾಂಗಣಮುಳ್ಕುವ
ಳುಳ್ಕದಿಂ

ಕರ ಕರವಾಳ ಘಾತದೊಳರಾತಿಯ ಪಂದಲೆ ಪಂಚರಾಯ
ಬೆರಸೆಸೆವಟ್ಟೆ ತೊಟ್ಟ ಕವಚಂಬೆರಸೇಱಿದ ವಾಜಿ ಲೋಹ
ಕ್ಕರಿವೆರಿಸೊಂದೆ ಸೂಱೊಳೆ ಪಡಲ್ಪಡೆ ಪೋರ್ವಲದುವು
ಬೀರ
[4]ಪೊರೆದಿರೆ ಬಿನ್ನಣಂ ನೆಗೞ್ದೆ ತಳ್ತಿಱಿವರ್ ಕೆಲರಾಜಿ
ರಂಗದೊಳ್

ಕಂ|| ಪಿಡಿದುದಿರ್ವ ಬಾಳ ಕಿಡಿಗ[5][ಳ] ।
ಸೊಡಸೊಡಸರಿಪೊತ್ತಿ ತೊಟ್ಟ ಸನ್ನಣವುರಿಯ ||

1 ವಾ (ಘ.) 2 ತೋ (ಗ). 3 ಱು (ಕ. ಗ.) 4 ಬೆ (ಕ.) 5

ಲ್ಕೊಡರಿಸಿದೊಡವಱ [1]ಪರ್ವಂ ।
ಬಿಡೆಯರಿದರಿಸಮಿತಿಯೊಡನೆ ಕಾದಿದರರೆಬರ್ ॥ ೭೯ ॥

ಚಂ ॥ ಭುಗುಭುಗ[2]ನುರ್ಚಿ ಪಾಯ್ವ ಬಿಸುನೆತ್ತರ ಸುಟ್ಟುರೆಯಂ ನೆಲಕ್ಕೆ ಪ ।
ರ್ದುಗಳುಗಲೀಯದಪ್ಪಳಿಸಿ ಪೀರ್ವಿನಮೊರ್ಮೆಯೆ [3]ಪೊಯ್ವ ಪೊಯ್ಗಳಿಂ ॥
ನೆಗೆದು ಮುಗಿಲ್ಗಳಿಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದ ಜೇನ[4]ಪು ।
ಟ್ಟಿಗಳನೆ ಪೋಲ್ತುವೇಂ ಕಲಹಮುಚ್ಚರಿಯಾಯ್ತೊ ತುರಂಗ ಸೈನ್ಯದೊಳ್ ॥ ೮೦ ॥

ವ ॥ ಅಂತೆರಡುಂ ಬಲದ ದೞಂಗಳ್ [5]ಕೋಲಾಟಮಾಡುವಂತೆ ಕೆಱದಾನುಂ ಬೇಗಂ ತಟ್ಟುಪೊಟ್ಟೆಂದು ಕೋ[6]ಲ್ಕುಟ್ಟಿ ಪತ್ತೆಂಟು ಸಾಸಿರ ಕುದುರೆಯಟ್ಟೆಯುಮೇೞ[7]ಂಟು ನೆತ್ತರ ಕಡಲ್ ಕಡಲನಟ್ಟೆಯುಂ ಕಾದಿ ಬಸಮೞದು ಪೆಱಪಿಂಗಿ ನಿಂದಾಗಳ್ ಪ್ರಳಯದುರಿಯನುರುಳಿ ಮಾಡಿದಂತಾನುಂ ಬಡವಾಗ್ನಿಯ *(ನನುವಿಸಿದಂತಾನುಂ) ಬಱಸಿಡಿಲ [8]ಕಿಡಿಗಳ ಬಳಗಮನೊಳಗುಮಾಡಿದಂತಾನುಂ ಗೊಂದಣಿಸಿ ಸಂದಣಿಸಿ ಸಂದಣಿಯನೆರಡುಂ ಬಲದ ಕಡಿತಲೆಯ ನಾಯಕರ್ ಕೆಯ್ಕೊಂಡು [9]ಳ್ಳುಗೆಡೆಪೆಕ್ಕೆವಾಱುವಾಱ ಪಲಗೆವಾ[10]ಡಿ ಗೂಳಿಸೊರ್ಕಿ ಮಾರ್ಕೊಂ ಡು ಕಾದೆ—

1 ಗ (ಕ.). ಸ (ಖ.). 2 ನೆಚ್ಚು (ಕ. ಖ. ಗ). 3 ಪಾ (ಖ. ಗ.), 4 ಗ (ಕ.ಗ.), ಘ (ಖ). 5 ಕಾ (ಗ.). 6 ಟ್ಕು (ಕ.). 7 ಕುದುರೆಯಟ್ಟೆಯಿನೇ (?) (ಪ.), ಕುದುರೆಯನಟ್ಟೆಯುಮೇ (?) (ಪ.). 8 ಕಡಿತ (ಕ. ಖ.), ಕಡಿ (ಗ). 9 ಳುಗೆಡದಿ (ಕ. ಗ.), ಳ್ಳುಡೆದೆ (ಖ). 10 ಡಿಗಳುರುಳಿ (ಕ.), ರಿಗಳುರುಳಿ (ಖ.) ಱಗರುಳಿ (ಗ.) ಱಗೂಳಿ (ಘ).

* ಘ. ಪ್ರತಿಯಲ್ಲಿ ಮಾತ್ರ.

5

ಕಂ || ಪುಸಿ ನಸು ವಂಚನೆ ನೋರ್ಪನು |
ವಸಿವಗಲಿತು ತಕ್ಕುದಕ್ಕು ಪಗೆ ಕೆಯ್ಪುಗೆ ಕೆ ||
ಯ್ಯುಸುರಿ ನುಸುಳೆಂಬ ಕೇಣದ |
ಕುಸುರಿಯನಱಿದಿಱಿದು ಮೆಱೆದು ನೆಱೆಧುಱದರಿಬ
|| ೮

ಬಱಿ ಸಿಡಿಲೆಱಪಂತಿರೆ ಬಂ |
ದೆಱಗಿದರಂ ತಳ್ತು ಬಾಳ ಕೀೞ್ಮೊನೆಯಿಂ ತ ||
ಳ್ತ [1]ಱದಱಿದುಬ್ಬರಮೆಂಬಿವ |
ನಱಿದಿಱಿದರ್ ಪೆಣಬಣಂಬೆಗಳ್ ನೆಗೆವಿನೆಗಂ || ೮

[2]ಚಾರಿಸ್ಸಿ ಬಾ[3]ಳಾಗಮುಮವ |
ತಾರಂ,ಗೆಯ್ದಂತೆ,ಕಾಲದಂತಕನನೆ ಪೋ ||
ಲ್ತಾರುತ್ತಂ ಕವಿವದಟರ |
ನೋರೊಂದ್ರೋರೊಂದೆ [4]ಪೊಯ್ದು ಕೊಂದರ್ ಪಲರಂ
|| ೮

ಬಾಳ್ವಾಳ್ಗಳ ಘಟ್ಟಣೆಯೊಳ್ |
ಬಳ್ವಳ ಬಳೆದೊಗೆದು ನೆಗೆದ ಕಿಡಿಗಳ ಬಂಬ ||
ಲ್ಗಳ್ವೆರಸು ಪೊಳೆದು ನೆಗೆದುದು |
ಬಾಳ್ಪೊಗೆ [ಕಾಱ ಮುಗಿಲ್] ಬಳ್ಳಿಮಿಂ [5][ಜಿನಿಂದು]
ವೋಲ್ || ೮

ತಲೆ ನೆಲದೊಳುರುಳ್ದೊಡಂ ಮೆ |
ಯ್ಗಲಿಯೊರ್ವಂ ಪಿಡಿದು ತಲೆಯನಿಟ್ಟಟ್ಟಿಯೊಳ ||
ಗ್ಗಲಿಸಿದ ಮುಳಿಸಿಂ ಮಾಟದ |
ತಲೆಯಿಟ್ಟಾಡುವನನಿನಿಸು ಪೋಲ್ತನುಗೆಯ್ದಂ || ೮

1 ಱವಾಱಿ (ಕ. ಗ.), ಱುವಾಱು (ಖ.). 2 ಜಾ (ಗ. ಘ.). 3 (ಖ.), ಳ್ವಾ (ಗ. ಘ.). 4 ವಾ. (ಕ.), ಪಾ (ಖ.), 5 ಜು ಬ (ಸ.).

ವ|| ಅಂತ್ತಣಿಮಣಿಯದೆ ಸೆಣಸಿ ಪೊಣರ್ದು ಕಿಱಿದು ಪೊೞ್ತು
ನಿಂದಾಗಳ್—

ಮಾರುತ ಘಾತ ಸಂಚಳಿತ ಕೇತು ಸಮೂಹಮುದಗ್ರ ಚಕ್ರ ಚೀ|
ತ್ಕಾರಮುದಾರ ವೀರ ಭಟ ಸಿಂಹ ನಿನಾದ ವಿಮಿಶ್ರಿತೋತ್ಕಟ||
ಜ್ಯಾ ರವಮಂಬರಾಂತರಮನಳ್ಳಿಱಿದವ್ವಳಿಪನ್ನೆಗಂ ಶರಾ|
ಸಾರದಗುರ್ವು ಪರ್ವಿ ನಿಲೆ ತಾಗಿದುವುಗ್ರ ರಥಂ ರಥಾಳಿಯೊಳ್
||೮೬||

ವ|| ಅಂತು ತಾಗಿದಾಗಳ್

ಕುದುರೆಯ ಬಣ್ಣದಿಂ ರಥದ ತೋರ್ಕೆಯಿನೆತ್ತಿದ ಚಿತ್ರಕೇತು
ವೃಂ|
ದದ ಕುಱುಪಿಂದುದಗ್ರ ರಥ ಚೋದಕ ಚಿಹ್ನದಿನಾತನೀತನೆಂ||
ಬುದನಱಿದೊರ್ವರೊರ್ವರನೆ ಮಚ್ಚರದಿಂ ಗಱಿಸನ್ನೆಗೆಯ್ದಿದಿ|
ರ್ಚಿದ ಪದದೊಳ್ ಪತತ್ರಿಮಯಮೆಂಬಿನಿತಾಯ್ತು ಸಮಸ್ತ
ದಿಕ್ತಟಂ ||೮೭||

ಕಂ|| ಪರಶು ಶರ ನಿಕರದಿಂ ಕು|
ಮ್ಮರಿಗಡಿದವೊಲ್ಪೊಡನೆ ಕಡಿಯೆ [1]ರಥಿಗಳ್ ರಥದಿಂ||
ಧರೆಗಿೞಿದು ವಿರಥರತಿರಥ|
ರರೆಬರ್ ಮೇಲ್ವಾಯ್ದು ರಥಿಗಳಂ ಸುರಿಗಿಱಿದರ್ ||೮೮||

ತೇರಂ ಪಾಯಿಸಿ ನೋಯಿಸಿ|
[2][ಪಾ]ರುವ [3][ಕು]ದುರೆಗಳನರೆಬರ್ರೆಯುರಿಯೆಚ್ಚರ್||
ಸಾರಥಿಯ ರಥಿಯ ತಲೆಗಳ|
ನೋರೊಂದಸ್ತ್ರದೊಳೆ ಪಾಱೆ ಜೇಱೆೞ್ಚಿನೆಗಂ ||೮೯||

ನೆತ್ತರ ಕೆಸಱೊಳ್ ಗಾಲಿಗ|
ಳೆತ್ತಂ ತಳರದೆ ಜಗಿಲ್ತು ನಿಲೆ ಧರೆಗಿೞಿದಾ||

---

1 ಕಲಿ (ಕ.), ಕಡಿ (ಖ. ಗ.) 2 ವಾ (ಸ.) 3 ಗು (ಸ.).

ರ್ದೆತ್ತಿ ಪರಿಯಿಸಿದರೇಂ ಮೆ।
ಯ್ವೆತ್ತುದೊ ರಥಕಲ್ಪಮಲ್ಲಿ ಸೂತರ್ ಕೆಲಬರ್

ವ॥ ಅಂತುಭಯ ವರೂಥಿನಿಯ ವರೂಥಂಗಳ್ ಮಲ
ಯಾಗೆ ಕಾದುವಾಗಳ್—

ಮ॥ ಉಡಿದಿರ್ದ[1]ಚ್ಚುಱಿದೀಸು ತಳ್ಗಿದ ನೊಗಂ ಜೀಱಿಟ್ಟ ಚಕ್ರ
ಸಿ
ಪೊಡೆದಂತೊರ್ಮೆಯೆ ಸೂಸಿ ಪಾಱಿದ ಮಡಂ ನುಗ್ಗಾದ
ನಡೆ ನೊಂದೆಯ್ದೆ ಸುರುಳ್ದುರುಳ್ದ ತುರಗಂ ಸುರ್ಕಿರ್ದ ಸೂ
ಕಡಲಂ ಮುಟ್ಟೆ ತೆರಳ್ವ ನೆತ್ತರ ಪೊನಲ್ ಕಣ್ಗೊಂಡುದು
ಗ್ರಾಜಿಯೊಳ್

ವ॥ ಅಂತು ಪತ್ತೆಂಟು ನೆತ್ತರಕಡಲ್ ಕಡಲನಟ್ಟಿಯುಂ
ಯೂಥಂಗಳ್[1]ಕ್ಕಿ ಮೆಳ್ಕಿದಂತಾಗಳ್—

ಉ॥ ಇಕ್ಕಿದ ಲೋಹವಕ್ಕರೆಯ [2]ಕರ್ಪುಗಳಿಂ (?) ಕವಿತರ್ಪ ವಿ
ಲಕ್ಕೆಣೆಯಾಗೆ ಜೋದರಿಸುವಂಬಿನ ಬಲ್ಸರಿ ತಿಣ್ಣಮಾಗಿ
ಯ್ಮಿಕ್ಕು ವಿರೋಧಿ ಸಾಧನ ಘಟಾಳಿಯ[3]ನೋಡಿಸಲಾಗಳ
ಟ್ಟಿಕ್ಕಿದರುಗ್ರ ಸಿಂಧುರ ಘಟಾವಳಿಯುಂ ಮುಳಿಸಿಂ ನಿಷಾದಿ

---

1 ಱಿಮುಟ್ಟಿ (ಕ.). 2 ಹಸ್ತಿಗಳಾ (?) (ಪ.). 3 ನೊಡ್ಡಿ (ಗ.

ಆದಿತ್ಯಂ ಮಸುಳ್ವನ್ನೆಗಂ [1]ಧ್ವಜ ಘಟಾಟೋಪಂಗಳಿಂದಂ
ಲಯಾಂ।
ಘೋದಂಗಳ್ ಕವಿವಂತೆವೋಲ್ ಕವಿವುದುಂ ಕಾಲ್ಗಾಪು
ಕಾಲ್ಗಾಪಿನೊಳ್ ॥
ಜೋದರ್ ಜೋದರೊಳಾನೆಯಾನೆಯೊಳಗುರ್ವಪ್ಪನ್ನೆಗಂ
ಕಾದೆ ಕ।
ಣ್ಣಾದಂ ಚೆಲ್ವೆಸೆದತ್ತು ಮೂಱು ನೆಲೆಯಿಂ
ಮಾದ್ಯದ್ಗಜೇಂದ್ರಾಹವಂ ॥ ೯೩ ॥

ವ ॥ ಅಂತಾ ದಂತಿ ಘಟೆಗಳನಾರೋಹಕರ್ ತೋಱಿಕೊಟ್ಟೊಂ
ರ್ಕೆ ಮೊಗಂಬುಗಿಸಿದಾಗಳುಭಯವ್ಯಾಳದಂತಿ [2][ವ]ಧ್ಯ ಕ್ರಮಂ
ಭಾರ್ಗವರ್ ಸುರಿಗಿಱಿವಂತಿಱಿಯೆ ಸೂಸುವ ಕೆನ್ನೆತ್ತ[3]ರ್
ದಿರ್ವ ಸಕ್ಕದ ಸಿಪ್ಪುಗಳುಂ ಸಿಡಿಲ್ದು ಜೇಱಿೀಟ್ವ ಕೋಟ್ಕಳು
ರ್ಗಂ ಪಡೆಯೆ—

ನಡುವ ಸರಲ್ಗೆ ಮೆಯ್ಯೊಳಗಡಂಗುವ ಸಂಕುಗೆ ದಿಂಕುಗೊಳ್ವ ಕ।
ಕ್ಕಡೆಗ್ಗಿದಿರುರ್ಚುವಿಟ್ಟಿಗಿದಿರಾನೆಯ ಕೋಟ್ಕಳ ಕೋಳ್ಗೆ ನೊಂದು
ಬಾ ॥
ಮ್ಪಿ[4]ಡದಿನಿಸಪ್ಪೊಡಂ [3]ಪೆಳಱಿದಳ್ಕದೆ ಪಾವಿನಲ್ಲಿಟ್ಟವೋಲ್ ಪೊಡ।
ರ್ಪುಡುಗದೆ ಬಿಟ್ಟುವಿರ್ದ ನೆಲೆಯಿಂ ಕೆಲವುನ್ಮದ ಗಂಧ ಸಿಂಧುರಂ
॥ ೯೪ ॥

ಕಂ ॥ ಪಾಱುವ ಪಾಱುಂಬಳೆ ಕೊಳೆ।
ಜೇಱಿಟ್ಟಿಂಬರಕೆ ತಲೆ ಸಿಡಿಲ್ದೊಡಮಾ ಕಾ ॥
ಯ್ಪಾಱದೆ ಹರಣಂ ಗೆಯ್ದುವು।
ಜಾಱಿಲ್ಲದೆ ಜೋದರಟ್ಟೆಗಳ್ ಕೆಲವಾಗಳ್ ॥ ೯೫ ॥

---

ಗ (ಕ.). 2 ಮ (ಸ.). 3 ರೊಳಗಟ್ಟು (ಕ.). 4 ಡ (ಖ. ಗ. ಘ.).
ಳ (ಘ.).

ಚಂ || ಕಣಕೆನೆ ಚಕ್ರ ತೀವ್ರ ಹತಿಯಿಂ ತಲೆ ಪೋದೊಡೆ ಜೋದರ
ದಣಿಸಿ[1]ದ ಬಂಧದಿಂ ಬಿಸುಗೆಯೊಳ್ ನೆಲಸಿರ್ದಸೆದಾಡೆ ಸಟ್ಟ
ರ್ಗಣೆವೆರಸಿರ್ದ [2]ಕೂರ್ಗಣೆಗಳುಚ್ಚಳಿಸುತ್ತಿರೆ ಸು[3]ಯ್ದು

ಥಿಣಗಳಿನಂದಗುರ್ವುವೆರಸಾಡಿದುವೊಂದೆರಡಾನೆಯಟ್ಟೆಗಳ್
||

ವ || ಅಂತೆರಡುಂ ಬಲದ ಕರಿ ಘಟೆಗಳೊಂದೊಂದಱೊಳ
ತಟ್ಟುಱಿಯೆ ಬಿಸುನೆತ್ತ [5][ರ] ಬರ್ಗಳುರ್ವಿ ಪಾಯೆ ಪೇರರ್ವಿಗ
ಜಾಜ್ಜಿನ ಪರ್ವತಂಗಳಂತೆ ಕೆಡೆದಟ್ಟಿಗಟ್ಟಿದಾಗಳ್—

ಕಂ || ಆನಿರ್ಯೆ[ೀ]ನಿಱುವುದು ಗಡ |
ಮೀ ನಾಲ್ಕುಂ ಬಲಮಿದಲ್ತೆ ಪರಿಭವಮೆನಗೆಂ ||
ದೇನುಂ ಮಾಣದೆ ಭೀಮನ |
ನೂನ ಬಲಂ ಬಂದು ತಾಗಿಪಂ ಕುರು ಬಲದೊಳ್ |

ವ || ಅಂತು ಕುರುಬಲದ ಕರಿಘಟೆಗಳಂ ನುಂಗುವಂತೆ ದೆಸೆ
ಮಿಳಿರ್ದು ಮಿಳ್ಳಿಸಿದ ಸಿಂಗದ ಪಱಿವಿಗೆಯುಂ ಕುರಬಲಕ್ಕೆ ಮಿಱ್ತು
ರೆವಂತೆ ಮೊರೆದು ಪರಿವ ತನ್ನ ಕಿಸುವೊನ್ನ ರಥಮುಂ ಭಯಂಕರ
ವಾಗೆ ಪಗೆವರ ಗಂಟಲನೊತ್ತುವಂತೆ [7]ಪೌಂಡ್ರಮೆಂಬ ಶಂಖಮ
ಮುಂದೊಡ್ಡಿದೊಡ್ಡೆಲ್ಲಮನಂ[8]ಬಿನ ಬಂಬಲೊಳೆ ಪಡಲ್ವಡಿಸುತ್ತುಂ
ಭೀಮಸೇನಂಗೆ ದುರ್ಯೋಧನನದಿರದಿದಿರಾಂತಾಗಳ್—

ಉ || ಎಂತಿದಿರಾಂತೆಯಂತೆ ಕಲಿಯಾಗೊಳಸೋರದಿರೆಂದು ಭೀವ
ರಂತೆ ಕನಲ್ದು ತಿಣ್ಣಮಿಸೆ ಪಾಯ್ದು ಸರಲ್ಗಳನೆಯ್ದಲೀಯು

1 ಕ (ಘ.). 2 ವಾ (ಘ.). 3 ಯ್ವ (ಗ. ಘ.), 4 ಣ್ಯ (ಖ. ಗ
5 ಬರ್ಗುರ್ವಿ (ಕ.), ಬರ್ಗುಳುರ್ವೆ (ಖ.), ಜರ್ಗುರ್ವೆ (ಗ.), ರುಜರ್
(ಘ.). 6 ಯೆನ್ನಿ (ಕ.), ಮೆಂಣಿ (ಖ. ಘ.), ಮೆ. . (ಗ.).
(ಕ. ಖ. ಗ.). 8 ಜಿಸಿ(ಕ.), ಚಿನ (ಖ. ಗ.), ಜಿನ (ಘ.).

ತಾಂತು ನಿರಂತರಂ ತಱಿದು ಸೂತನನಾತನ ವಾಜಿಯುಂ ಮಹೀ।
ಶಂ ತೆಗೆದೆಚ್ಚನಚ್ಚ ಬಿಸುನೆತ್ತರ ಸುಟ್ಟುರೆ ಸೂಸುವನ್ನೆಗಂ॥ ೯೮ ॥

ಕಂ॥ ಇಸೆ,ಮುಸುಗಿ ಭೀಮನೀರ।
ಯ್ದು [1][ಶಿ]ತಾಸ್ತ್ರದಿನುರುಳೆ ಸೂತನುಡಿಯೆ ರಥಂ ಕೀ॥
ಲಿಸೆ ಕುದುರೆ ಮುಱಿಯೆ ಪಟುವಿಗೆ।
ಮುಸಕದಿನೆಚ್ಚೆಚ್ಚನೊಂದೆ ಸರಲೊಳ್ ನೊಸಲಂ ॥ ೯೯ ॥

ಪಟ್ಟಂಗಟ್ಟಿದ ನೊಸಲಂ।
ನಟ್ಟ ಸರಲ್ವಿಡಿದು ನೆತ್ತರಂಬಿರಿವಿಡೆ ಕ॥
ಣ್ಗೆಟ್ಟಿರ್ದ ನೃಪನನಂಕದ।
ಕಟ್ಟಾಳ್ಗಳ್ ಕಾದು ಕಳಿಪೆ [2]ದುರ್ಯೋಧನನಂ ॥ ೧೦೦ ॥

ವ॥ [3][ಆಗಳವನನುಜರ್] ನೂರ್ವರುಂ ಬಂದು ತನ್ನನೊರ್ವನಂ ತಾಗಿದೊಡನಿಬರುಮಂ ವಿರಥರ್ಮಾಡಿ ಭಾರತಮನಿಂದೆ ಸಮೆಯಿಸುವೆನೆಂದು ಕೋದಂಡಮುಂ ಬಿಸುಟು ಗದಾ ದಂಡಮುಂ ಭುಜಾ ದಂಡದೊಳಳವಡಿಸಿಕೊಂಡು—

ಚಂ॥ ಕುರು ಬಲಮುಂ ಪಡಲ್ವಡಿಪ ತಕ್ಕಿನೊಳ್ಕೆಯ್ತುರೆ ಬರ್ಪ ಭೀಮನಂ।
[4]ಬರೆ,ಬರಲೀಯದಿರ್ದವರನಾ ಪದದೊಳ್ ಪೆಱಗಿಕ್ಕಿ ಗಂಧ ಸಿಂ॥
ಧುರ ಘಟೆ ನಾಲ್ಕು ಕೋಟಿವೆರಸಾಗಡೆ ಬಂದು ಕಳಿಂಗರಾಜ[5]ನ್ನಾಂ।
ತಿರೆ ಪಗೆ ಕೆಯ್ಗೆವಂದು ಬರ್ದುಕಾಡಿದ ಬಲ್ಮುಳಿಸಿಂ ವೃಕೋದರಂ ॥ ೧೦೧ ॥

ವ॥ ಅಂತು ಕಳಿಂಗರಾಜ ಮತ್ತ ಮಾತಂಗ ಘಟೆಗಳ ಮೇಲೆ ಮುಳಿಸಂ ಕಳೆವೆನೆಂದು ಸಿಂಹನಾದದಿನಾರ್ದು—

---

1 ಸಿ (ಸ.). 2 ಯಾಗಳವನನಜುರ್ (ಘ§). 3 ಅಂತು (ಕ. ಖ. ಗ.) 4 ಬರಲಿಯದಿರ್ದೊಡಂ ತವರ (ಕ. ಖ.), ಬರಲಿಯದಿರ್ದ ವಿರಥರ (ಗ.). 5 ತಾಂ (ಖ. ಗ. ಘ.).

ಮ ॥ ಗಜೆಯಂ ಘೋರಿಸೆ ಪರ್ವಿ ಬೀಸಿ ಕಡುಪಿಂದೆಯ್ತಂದು ಮಾಱಾಂ
ಸಾ
ಮಜಸಂಘಾತಮನೊಂದುಗೊಳ್ಳಿರಡುಗೊಳ್ಳಿಂಮರ್ವಿ
ಪೊ[1]ಯ್ಪೊಂದು ಪೊ
[2]ಯ್ಗೆ ಜವಂಗುಂದಿ ಸಿಡಿಲ್ದು ಮುನ್ನಡಿಗುರುಳ್ತರ್ಪನ್ನೆಗಂ ಬೀ
ದ
ಗ್ಗಜಮಂ ಪೋಲ್ವ ಗಜಂಗಳಂ ಪಲವುಮಂ ಕೊಂದಂ ಮರುನ್ನ
ದನಂ ॥ ೧೦೨

ಕಂ॥ ಬಡಿಗೊಳ್ಳಿ ಬಿದು ಬಿಬ್ಬರ ಬಿರಿ।
ದ್ದೊಡನುಗೆ ಪೊಸ ಮುತ್ತು ಕೋಡನೂಱೆ ಮದೇಭಂ ॥
ಕೆಡೆದುವು ಕೊಲ್ಲದಿರೆಂದಿರ
ದಡಿಗೆಱಗುವ ತೆಱನನಿನಿಸನನುಕರಿಸುವಿನಂ ॥ ೧೦೩

ವ ॥ ಅಂತು ಪತ್ತೆಂಟುಸಾಸಿರಮಾನೆಯಂ ಪಡಲ್ವಡಿಸಿಯುಂ
ಸೈರಿಸಲಾಱದೆ—

ಮ ॥ ಪಿಡಿದೊಂದೊಂದಱ ಗಾತ್ರಮಂ ತಿರಿಪಿಕೊಂಡಂದೊಂದಱೊಳ್
ಪೊಯ್ದು ಮೆ
ಲ್ವಡಗಪ್ಪನ್ನೆಗಮೆತ್ತಿ ಕೊಂಡ್ರಸಗ[3]ಪೊ[ಯ್ಪೊ]ಯ್ಪೊಳ್ ತಡಂಬೊಯ
ಮು
ಳ್ವಡಗುಂ ನೆತ್ತರುಮೆಲ್ವುಮೆಲ್ಲ ದೆಸೆಗಂ ಜೀಱೆಱಿಬ್ಬು ಪಾಱಲ್ಕೆ ಬ
ಲ್ವಡಿಗಂ ಬೀಸಿಯುಮೊಂದು ಕೋಟಿವರೆಗಂ ಕೊಂದಂ
ಮದೇಭಂಗಳಂ ॥ ೧೦೪

1 ಯ್ಯೆಂ (ಕ.), ಯ್ಪೊಂ (ಖ.). 2 ಯ್ಯೆ (ಕ.). 3 ಪೊಯ್ಲೊಳ್ಪೊಯ್ಸುತ
ಪೊಯ್ಸು (ಕ.), ಪೊಯ್ಪೊಯ್ಪು ತಂಡಂಬೊಯ್ಪು (ಖ.), ಪೊನಿಲೊಳ್ಪೊಯಿ
ತಡಂಬೊಯ್ಪು(ಗ.), ಪೊಯ್ಲಿಯುಂ ತಡಂಬೊಯ್ಪು (ಘ.).

ಸಿಡಿಲಂತೊರ್ಮೆಯೆ ಪೊಯ್ಯೆ ಪೊಯ್ದ ಭರದಿಂದೊಂದಾನೆ ತೋಲ್ ನೆತ್ತರಿ।
ಡಗೊಂಡೊಂದಱೊಳೊಂದುವೊಂಪದೆ ಗದಾ ನಿರ್ಘಾತದಿಂ ಮಾಯವಾ ॥
ಡೆ ಪೋ ತಪ್ಪಿದೆನೆಂದು ಪಲ್ಮೊರೆದಗುರ್ವಪ್ಪನ್ನೆಗಂ ಮೀಸೆಯಂ ।
ದಂ ತೋಳ್ವಲದೇೞ್ಗೆ ಮೆಚ್ಚುವನಿತರ್ಕುಗ್ರಾಜಿಯೊಳ್ ಭೀಮನಾ ॥ ೧೦೫ ॥

ಕಂ॥ ಧ್ವಜಮುಂ ಬಿಸುಗೆಯುಮೇಱೆ ।
ದರ್ ಜೋದರುಂ ಬೆರಸು ಗಜೆಯಿನರೆ ಗಜ ಘಟೆಯಂ ॥
ಗಿಜಿಗಿಜಿಯಾಗಿರೆ ಪೊಯ್ದೊಡೆ ।
ಗುಜು ಗುಜುಗೊಂಡಾರ್ದರಮರರಂಬರ ತಳದೊಳ್ ॥೧೦೬॥

ವ ॥ ಅಂತು ಗಾಳಿಗೊಡ್ಡಿದ ಘನ ಘಟೆಯಂತೆ ತನಗೊಡ್ಡಿದ ಕಳಿಂಗ ಮತ್ತಮಾತಂಗ ಘಟೆಗಳಂ ಕಟಕುಟಂ ಮಾಡಿದನನ್ನೆಗಮಿತ್ತ ಮೊನೆಯೊಳ್ ಧರ್ಮ ಪುತ್ರಂ ಕಾದಿ ನಾಲ್ಕು ಕೆಲ್ಲಂಬುಗಳಿಂದಾ ರೂಥ ಸೂತ ಕೇತನಂಗಳಂ ಕಡಿದು—

ಕಂ॥ ಉರಮಂ ಬಿರಿವಿನಮಿಸೆ ಮ ।
ದ್ರ ರಾಜನಳಿಯನ ಪರಾಕ್ರಮಕ್ಕೊಸೆದು ಮೊಗಂ ॥
ಮುಱಿಯದೆ ಪೆಱತುಂ ರಥ [ಮಂ ।
ತರಿಸಿ ಕನಲ್ದಡರ್ದು ಕದನಕಾಗಳೆ ನೆಱೆದಂ] ॥ ೧೦೭ ॥

[ಮುಱಿದು ರಥಮಂ] ರಥಾಶ್ವಮ ।
ನುಱಿದೆ[ರಡುಂ ಶರದೆ] ನಾಲ್ಕಱಿಂ ಸೂತನನೊಂ ॥
ದಱಿಕೆಯ ಸರಲೊಳ್ [ಮಾಣದೆ] ।
ತಱಿದಂ ಪಟುವಿಗೆಯನೇಂ ಕೃತಾಸ್ತ್ರನೊ ಶಲ್ಯಂ ॥೧೦೮ ॥*

* ಈ ಪದ್ಯದ ಪಾಠವು ಯಾವ ಪ್ರತಿಯಲ್ಲಿಯೂ ಪೂರ್ತಿಯಾಗಿಯೂ ಸವಾಗಿಯೂ ಒಂದೇ ರೀತಿಯಾಗಿಯೂ ಇಲ್ಲ.

ವ || ಅಂತು ವಿರಥನಂ ಮಾಡಿ ಧರ್ಮಪುತ್ರನಂ ಪಿಡಿಯಲೆ
ಮದ್ರರಾಜನಂ, ಪನ್ನಿರ್ಛಾಸಿರಮಾನೆವೆರಸು ನೃಪನ ಚಕ್ರರಕ್ಷ
ನೆಡೆಗೊಂಡು ತಾಗಿದಾಗಳ್—

ಕಂ || ಮೃಗರಾಜ ನ[1]ಖರ ಬಾಣಾ |
ಳಿಗಳಿಂ ತೆಗೆನೆಱೆದು ಶಲ್ಯನುಱದಿಸೆ ಬಿಡುವಂ ||
ಮೃಗರಾಜಂಗಳೆ ಪೋಟ್ವಿ ವೊ |
ಲಗಲ್ವಿನಂ ಪೋಟ್ದುವುಗ್ರ ಬಾಣಾವಳಿಗಳ್ ||

ವ || ಅಂತಾ ದಂತಿಘಟೆಯಂ ಪಡಲ್ವಡಿಸಿ ನೀಳನೇಱದಾನೆ
ನೂಱ್ಕೊಂಡೆಚ್ಚಾಗಳ್—

ಕಂ || ಪೆಱಗಿಡುವ ದಂತಿಯ, ಕಲಿ |
ನಿಱಸಿ ಚಲಂ ನೆಲಸೆ ತೋಱುಕುಡುವುದುವಾಗಳ
ಪೊಱ[2]ಮುಯ್ಯುವರಂ ತೆಗೆನೆಱೆ |
ದುಱದೆಚ್ಚಂ ಶಲ್ಯನಾಂತ ನೀಳನ ತಲೆಯಂ ||

ವ || ಅಂತು ನೀಳಂ ನೀಳಗಿರಿಯ ಮೇಗಣಿಂ ಬಱಸಿಡಿಲ್
ಕೆಡೆವ ಮೃಗರಾಜನಂತೆ ಹಸ್ತಿ ಮಸ್ತಕದಿಂ ಕೆಡೆವುದುಮುತ್ತ ಭೂ
ಮೊನೆಯೊಳ್ ಕಾದುತ್ತಿರ್ದುತ್ತರಂ ನಾಲ್ವತ್ತು ಸಾಸಿರಮಾನೆವೆರ
ಪೆಱಗಿಕ್ಕಿ ಬಂದಾಂತಾಗಳ್—

ಚಂ || ನಗೆ ಪಗೆವಾಡಿ, ಗೋಗ್ರಹಣದೊಳ್ ಪೊಱಮಾಱದ ಬನ್ನ
ಮೊಂ
ಟ್ಟಗೆ ಮನಮುಂ ಪಳಂಚಲಿಯೆ ಮಾಣದ ಶಲ್ಯನನಂ[3]ದಶಲ
ಬಗೆವವೊಲೇಳಿದಂ ಬಗೆದು ದಂತಿಯನಾಗಡೆ ತೋಱುಕೊ
ಟ್ಟಗೆ ರಥಮುಂ ಪಡಲ್ವಡಿಸಿ ಪೂಣ್ದಸರಾತಿಯುನಸ್ತ್ರಕೋಟಿ
||

1 ವ (ಕ. ಖ.), ಕ (ಗ.). 2 ಮೆಯ್ಯ (ಕ). ಮುಯ್ಯು (ಖ.). 3

ವ || ಅಂತುತ್ತರಂ ತನಗಳವುಮದಟುಂ ರಾಜೋತ್ತರಮಾಗೆ ಕಾದಿ
ಾಡೆ ಶಲ್ಯಂ ವಿರಥನಾಗಿ ಸಿಗ್ಗಾಗಿ—

|| ತಾರಕನಂ ಗುಹಂ ಮುಳಿದು ಶಕ್ತಿಯಿನಾಂತಿಡುವಂತರಾತಿ ಸಂ |
ಹಾರಕವಪ್ಪ ವಿಸ್ಫುರಿತ ಶಕ್ತಿಯಿನಾತನನಿಟ್ಟು ಖಟ್ಗದಿಂ ||
ವಾರಣಮುಂ ಪಡಲ್ವಡಿಸಿ ತಾಂ ಪೆಱಪಿಂಗುವುದುಂ ಬಲಕ್ಕೆ ಹಾ |
ಹಾ ರವಮುಣ್ಮೆ ದಂತಿವೆರಸಾಜಿಯೊಳುತ್ತರನಟ್ಟಿ ತಟ್ಟಿದಂ
|| ೧೧೨ ||

ವ || ಅಂತುತ್ತರನಂ ಜವಂಗೆ ಪೊಸತಿಕ್ಕುವಂತಿಕ್ಕಿ ಬಸವಟ್ಟಿದ
ೖನಂ ಕೃತವರ್ಮಂ ತನ್ನ ರಥಮನೇಱಿಸಿಕೊಂಡು ನಿಂದನನ್ನೆಗಮಿತ್ತಲ
ಾಪಗಾಸುತನ ಮೊನೆಯೊಳ್ ಭರಂಗೆಯ್ದು ಕಾದುವ ಸೇನಾನಾಯ
ಶ್ವೇತಂ ತನ್ನ ತಮ್ಮನತೀತ ನಾದುದಂ ಕೇಳ್ದು—

|| ಪ್ರಳಯ ಪಯೋಧಿವೋಲಳುರ್ದು ಪೆಂಕುಳಿಗೊಂಡ ಮದೇಭವೈರಿ
ವೋಲ್ |
ಕೆಳರ್ದು ಲಯಾಗ್ನಿವೋಲಳುರ್ದು ಮದ್ರ ಮಹೀಶನನೆಯ್ದೆ ತಾಗೆ
ಬ ||
ಳ್ಪಿಳ ಬಳಿವತ್ತು ಶಲ್ಯನೊಳಿ ಕಾಳಿಗಮೀಗಳೆಸುತ್ತುಮಂತೆ ಕೆ |
ಯ್ಕೊಳಲಹಿಕೇತು ಸಿಂಧುತನಯಂಬೆರಸಾಗಡೆ ಬಂದು ತಾಗಿದಂ
|| ೧೧೩ ||

ವ || ಇತ್ತ ಧರ್ಮಪುತ್ರನುಂ ವಿರಾಟ ಧೃಷ್ಟದ್ಯುಮ್ನ ಶಿಖಂಡಿ
ಕಿತಾನ ಕೇಕಯ ಸಾತ್ಯಕಿ ನಕುಳ ಸಹದೇವ ಸೌಭದ್ರ ಪ್ರಮುಖ
ುಕರ್ವೆರಸು ರಣಪಟಹಂಗಳಂ ನೆಗೞ್ಚಿ ಕೃಪ ಕೃತವರ್ಮ ವಿವಿಂಶತಿ
ರ್ಣ ಚಿತ್ರಸೇನ ಸೋಮದತ್ತ ಭಗದತ್ತ ಬಾಹ್ಲೀಕ ಭೂರಿಶ್ರವಃ
ೃತಿಗಳ್ ಗಜಱಿಸನ್ನೆಗೈದು ಕಾದುವಾಗಳ್—

ಚಂ॥ ಸಡುವ ಸರಲ್ ಸರಲ್ಗೊಳೆ ಸುಪುಳ್ಸ ಹಯಂ ಹಯಮುಳ್ಗ
ಳೊ
ತೊಡರ್ವ ಭಟರ್ ಭಟರ್ಕಳೊಳೆ ತೊಟ್ಟುಱಿಪಾಟ್ಟಿ ರಥಂ
ರಥಕ್ಕೆ ವ
ಯ್ದುಡಿಗಿಡೆ ಮೆಯ್ಪೊಣರ್ಚುವ ಮಹಾರಥ[1] ರಾಜಿಯೊಳಂತಗು
ಚ್ಚುಡಿದಿರೆ ಕಾದಿ ಬಿಚ್ಚಱಿಸಿದರ್ ಬಿಸುನೆತ್ತರ ಸುಟ್ಟುರೆ ಸೂ
ವನ್
॥ ೧೧

ವ॥ ಅಂತೆರಡುಂ ಪಡೆಯ ನಾಯಕರೊರ್ವರೊರ್ವರೊಳ್
ಮಟ್ಟು ಕಾದುವಾಗಳ್ ಶ್ವೇತಂ ತನ್ನ ತಮ್ಮ[3]ನಱಿವಿನೊಳಾದ ಮು
ನೊಳ್ ಕಣ್ಗಾಣದೆ ಶಲ್ಯನಂ ಮುಟ್ಟೆವಂದು—

ಚಂ॥ ಮುಳಿಸಿನೊಳೆಯ್ದೆ ಕೆಂಪಡರ್ದ ಕಣ್ಗಳಿನೊರ್ಮೆಯೆ ನುಂಗು
ವಂತಸ
ಗೊಳೆ ನಡೆ ನೋಡಿ ಮಾಣದುರಮಂ ಬಿರಿಯೆಚ್ಚೊಡೆ ಸೂಸಿ
ಪಾಯ್ವಸ
ಗ್ಗಳಮುವನುಗ್ರ ಕೋಪ ಶಿಖಿ ತಳ್ತುರ್ವಂತೆವೊಲಾಗೆ ಶಲ್ಯನ
ಗಳೆ ರಣದೊಳ್ ನೆಱಲ್ದೊಡವನಂ ಪೆಱಗಿಕ್ಕಿ ಸುರಾಪಗಾತ್ಮಜ
॥ ೧೧

ವ॥ ಅಂತು ಪ್ರಳಯಕಾಲದಂದು ಮೂಡುವ ಪನ್ನಿರ್ವರಾದಿ
ತೇಜಮುಮಂ ಮಹೇಶ್ವರ ಭೈರವಾಡಂಬರಮುಮಂ ಯುಗಾಂತ ಕಾ
ತಕನ ಮುಸಕಮುಮಂ ತನ್ನೊಳಳವಡಿಸಿಕೊಂಡು—

1 ರುಪ್ಪತರಿಂತಗು (ಕ. ಖ. ಗ. ಖ.). 2 ಬಿರ (ಕ.), ಜಿರ (ಖ. ಗ.
3 ನೆಳ (ಖ. ಗ. ಘ.),

ಂ ॥ ಖರ ಕಿರಣ ಪ್ರಚಂಡ ಕಿರಣಾವಳಿ ಲೋಕಮನೆಯ್ದೆ ಪರ್ವುವಂ।
ತಿರ್ರೆ ಕಡುಕೆಯ್ದು ತನ್ನೆರಡು ಕೆಯ್ಯೊಳಮೆಚ್ಚ ಶರಾಳಿಗಳ್ ಭಯಂ॥
ಕರತರಮಾಗೆ ಭೂ ಭುವನಮೆಲ್ಲಮನೊರ್ಮೆಯೆ ಸುತ್ತಿ ಮುತ್ತಿ
ಕೊಂ।
ಡಿರೆ ದೆಸೆಗಾಣಲಾಗದು [1]ದಲಾ ರಣಗಟ್ಟಳೆ ಮಂದಮಾದುದೋ
॥ ೧೧೬ ॥

ವ ॥ ಎಂಬಿನಮಂಬಿನ ಬಂಬಲೊಳಂ ಜೋಡಾಗಿ ಕೋಡನೂಱಿ
ದ ಗಜವ್ರಜಂಗಳ ಡೊ[2]ಣೆವುಗಳಿಂದೊಱ[3]ತು ಪರಿವ ನೆತ್ತರ ಕಡಲ್ಗಳುಂ
ರ ಕಡಲ್ಗಳೊಳ್ ಮಿಳಿರ್ವ ಪಟವಿಗೆಗಳ್ ತಲೆದೋಱ[3] ಮುೞುಂ
ರಥಂಗಳುಂ ರಥಂಗಳ ಗಾಲಿಗಳ್ಗಡ್ಡಮಾಗಿ ಬಿೞ್ದಿರ್ದ ಮದಹಸ್ತಿಗಳುಂ
ದಹಸ್ತಿ ಮಸ್ತಕಂಗಳನೋಸರಿಸಿ ರಥಮಂ ಪರಿಯಿಸುವ ರಥ ಚೋದಕ
ರಥ ಚೋದಕರ ಬಿಟ್ಟ ಬಾಯ್ ಬಿಟ್ಟಂತಿರೆ ಬಿಟ್ಟ ತಮ್ಮ ಕರುಳ್ಗ
ಳ್ [3]ತವೆ ತೊಡರ್ದು ಕೀಲಿಂ ಕರ್ಚಿ ದಿಂಡು ಮಗುಳ್ದು ಕೆಡೆವ
ತ್ಯಶ್ವಂಗಳುಂ ಜಾತ್ಯಶ್ವಂಗಳ ಪೆಣದ ತಿಂತಿಣಿಯೊಳ್ ತೊಡರ್ದೆಡ
ಸ್ತಮಾಡುವ ಸುಭಟರಟ್ಟೆಗಳುಂ ಸುಭಟರಟ್ಟೆಗಳನೆೞ್ಬಟ್ಟೆಕುಟ್ಟುವ
ಂಡು ಮರುಳ್ಗಳುಂ ಮರುಳ್ಗಳಾಟಮಂ ಪಳಪಳನೆಮೆಯಿಕ್ಕದೆ ನೋಡಿ
ಗುಳ್ನಗೆ ನಗುವ ವೀರ ಭಟರ ಪಂದಲೆಗಳುಮಗುರ್ವುಮದ್ಭುತ ಭಯಾ
ವೀರ ಬೀಭತ್ಸ ರೌದ್ರ ರಸಂಗಳಂ ಪುದುಂಗೊಳಿಸೆ ಗಾಂಗೇಯಂ
ಡೆಯುಂ ಪೊೞ್ತು ಕಾದೆ—

॥ ಪಟ್ಟಂಗಟ್ಟಿದಿಳಾಧಿನಾಥರೆ ಪಯಿಂಛಾಸಿರ್ವರೊಳ್ಯಾನೆಗಳ್ ।
ಪಟ್ಟಂಗಟ್ಟಿದುವೊಂದು ಲಕ್ಕ ತುರಗಂ ಪತ್ತೆಂಟು ಲಕ್ಕಂ ಪಡ ॥
ಲ್ವಟ್ಟೆಱ್ಕಡಿದುವೊಂದೆ ಬಿಲ್ಗನೆ ನದೀಪುತ್ರಂಗೆ ಪೇೞಾರ್ ಚಲಂ।
ಬಟ್ಟಂ ಮಾರ್ಮಲೆದಂಬುದೊಟ್ಟುಮುೞಿವರ್ ಸಂಗ್ರಾಮ ರಂಗಾ
ಗ್ರದೊಳ್ ॥ ೧೧೭ ॥

---

1 ರಣಾಂಗಣ (ಕ. ಖ.). 2 ಣವು (ಕ.). ಣೆವುಂ (ಖ. ಘ). 3 ತಾಮೆ
),

ವ || ಎಂಬನ್ನೆಗಂ ಶ್ವೇತನುಮನವರತ ಶರಾ[1]ಸಾರದಿಂ ಕುರ
ಮೆಲ್ಲಮನರೆದು [2]ಸಣ್ಣಿಸಿದಂತೆ ಮಾ[3]ಡಿ ಕವೆ ನೆರವಿಯು[4]ನ
ಕೊಂದೊಡಮೇವಂದಪುದೆಂದು ಗಾಂಗೇಯಂಗದಿರದಿದಿರಂ ಮಾಕೊ
ಬಿಲ್ವೊಯ್ದು ನಿಂದಾಗಳ್—

ಉ || ಶ್ವೇತನ ಬಿಲ್ಲೊಳಿರ್ದ ಮದನಾರಿಯ ರೂಪೆರ್ದೆಗೊಳ್ವುದುಂ
ಜಾತನುದಾತ್ತ ಭಕ್ತಿಯೊಳೆ ಕೆಯ್ಮುಗಿದಾಗಳಿದೆಂತೊ ನಿಮ್ಮ
ಮೂರ್ತಿನ ಬೀರಮೀಯೆಡೆಗೆವಂದುದೆ ಮುಪ್ಪಿನೊಳೆಯ್ದೆ ಲಿ

ಖ್ಯಾತರಿರಾಗಿ ಕೆಯ್ದುವಿಡಿವಲ್ಲಿಯೆ ಕಾಲ್ವಿಡಿಯಲ್ಕೆ ತಕ್ಕುದ
|| ೧೦

ಚಂ || ಎನಗೆ ರಣಾಗ್ರದೊಳ್ ಪೊಣರ್ವೊಡಂಕದ ಪೊಂಕದ ಸಿಂಧು
ಪುತ್ರ
ರ್ವನೆ ದೊರೆಯೆಂದು ನಿಮ್ಮೊಳೆ ವಲಂ ತಱಿಸಂದಿಱಿಯಲ್ಕೆ
ಪೂಣ್ದೆ
ನೆನಗಿಱಿವಟ್ಟಿಯಂ ಕಿಡಿಸಿ ನಿಮ್ಮಳವಂ ಪೆಱಗಿಕ್ಕಿ ನೀನುವಿ
ತಿನಿತೆರ್ದೆಗೆಟ್ಟರಿಂ ತುಱಿಲ ಸಂದರನಾರುಮನೆಂತು ನಂಬುವರ
|| ೧೧

ವ || ಎಂದು ತನ್ನಂ ನೋಯೆ ನುಡಿದೊಡೆ ಸಿಂಧುಪುತ್ರನಿ
ದಂ—

ಮ || ನಿನಗೇನೆಂದೊಡಮೆಂದುದೊಪ್ಪಿದಪ್ಪುದಂತೇಕೆನ್ನ ನಿನ್ನ ಶರಾ
ಸನದೊಳ್ ಶೂಲ ಕಪಾಲ ಪಾಣಿ ದಯೆಯಿಂ ಬಂದಿರ್ದನುಂ
ನುವಿ

ನಿಮ್ಮ ನಿಮ್ಮನಿ

SHANKARA.

1 ಘಾತ (ಘ.). 2 ಪಂ (ಕ. ಖ.). 3 ಡಿ ತರೆ (ಖ. ಗ.). ಡುತ್ತಿರೆ (
4 ನ (ಕ. ಘ).

ಶಿನಿತಂ ನೀಂ ನುಡಿವನ್ನೆಗಂ ತಡೆವೆನೇ ತ್ರೈಲೋಕ್ಯ ನಾಥಂ ಕಣಾ।
ವಿನಮನ್ಮಸ್ತಕನಾದೆನಣ್ಮುವೊಡೆ ನೀನೀ ದೇವನಂ ತೋಱುವೈ ॥ ೧೨೦ ॥

ಕಂ ॥ ಇಱಿವಂತು ನಿನಗೆ ಮನದೊಳ್ ।
ತಱಿಸಲವುಂಟಪ್ಪೊಡೆಲವೊ ದೇವೇಶನನೇಂ ॥
[1]ಸೆಱೆವಿಡಿದೆ ತೊಲಗು ದೇವನ ।
ಮಱೆಯಂ ಬಱಿಕಱಿಯಲಕ್ಕುಮೆನಗಂ ನಿನಗಂ ॥೧೨೧॥

ವ ॥ ಎಂಬುದುಂ ಶ್ವೇತನಿಂತೆಂದಂ—

॥ ಕಾಗೆವೊಲಿಂತು ಬಿಲ್ಗೆ ಕರಮಂಜುವಿರಂಜಲಿಮಾ ತ್ರಿಣೇತ್ರನಂ ।
ಪೋಗೆಡೆಗೊಂಡು ಕಾದುವೆನೆ ಕಾದೆನಿದಂ ಹರನಿತ್ತನೆಂದು ನೋ ॥
ಡಾಗ[2]ಡುಮಟ್ಟಿಯಿಂ ಪಿಡಿವೆನಕ್ಕಟ ನಿಮ್ಮನದಿರ್ಪುವಲ್ಲಿ ಚಾ ।
ಪಾಗಮಮೇವುದಂತೆನಗೆ ಬಿಲ್ವರಮಾಜಿಯೊಳಾಂಪ ಗಂಡರಾರ್ ॥ ೧೨೨ ॥

॥ ಬಿಸುಟೆಂ ಬಿಲ್ಲನದೇವುದೆಂದು ಕಡುಪಿಂದೀಡಾಡಿ ಸೂರ್ಯಪ್ರಭಾ ।
ಪ್ರಸರಂಗಳ್ ಮಸುಳ್ವನ್ನೆಗಂ ಪೊಳೆವುದೊಂದಂ ಶಕ್ತಿಯಂ ಕೊಂಡಗು ॥
ರ್ವಿಸಿ ಗಾಂಗೇಯನನಿಟ್ಟನಿಟ್ಟೊಡದನೀರಯ್ದಸ್ತ್ರದಿಂದೆಚ್ಚು ಖಂ ।
ಡಿಸಿ ಪೇರಾಳ್ ತಿಱಿದಿಕ್ಕಿದಂತೆ ತಲೆಯಂ ಪೋಗೆಚ್ಚನಾ ಶ್ವೇತನಾ ॥ ೧೨೩ ॥

ಕಂ ॥ ಶ್ವೇತನ ಬೀರಮನುಪಮಾ ।
ತೀತಮನೀ ಧರೆಗೆ ನೆಗೞೆ ನೆಗೞ್ದನಿದನಾಂ ॥
ಪಾತಾಳಕ್ಕಱಿಪುವೆನೆಂ ।
ಬೀ ತೆಱದೊಳೆ ದಿನಪನಪರ ಜಲನಿಧಿಗಿೞಿದಂ ॥ ೧೨೪ ॥

---

1 ತುಱೆವಿಡಿದ(ಗ. ಘ. , ಮಱೆವಿಡಿವೊ (ಘ§.). 2 ಳು (ಕ.), ಡು. (ಖ.).

ವ || ಆಗಳೆರಡುಂ ಪಡೆಯ ನಾಯಕರಪಹಾರತೂ
ಬಾಜಿಸಿ ತಮ್ಮ ತಮ್ಮ ಬೀಡುಗಳ್ಗೆ ಪೋದರನ್ನೆಗಮಿತ್ತ ಸ
ಬಲಮನೆಲ್ಲಮನೊಂದೆ ರಥದೊಳಾದಿತ್ಯನಸುರರನದಿರ್ಪುವಂತ
ವಿಕ್ರಮಾರ್ಜುನನುಮರಾತಿಕಾಳಾನಳನುಮತಿರಥ ಮಥನನು
ಕುರಂಗ ಕಂಠೀರವನುಂ ಸಾಹಸಾಭರಣನುಮುಮ್ಮನಗಂಧವಾ
ಪಡೆಮೆಚ್ಚೆಗಂಡನುಂ ಪರಸೈನ್ಯಭೈರವನುಮೆಂಬ ಪೆಸರ್ಗಳನ
ಮಾಡಿ–

ಚಂ|| ನೆರೆಪನುರಾಗದಿಂ ಪಡೆಯ ಪಾಡಿಯ ಬೀರರ ಪೆಂಡರಬ್ಬ
ಪಸರಿ[1] ಯೊಡಿಲ್ದು ಸೇಸಗಳನಿಕ್ಕೆ ಮುರಾರಿಯ ಪಾಂಚಜನ್ಯ
ಸ್ಫುರಿತ ರವಂ ಜಯೋತ್ಸವದ ಘೋಷಣೆಯಂತಿರೆ ಪೊಕ್ಕ
ದಿರಮನುದಾತ್ತ ಚಿತ್ತನವನೀತಳ ಪೂಜ್ಯ ಗುಣಂ ಗುಣಾ

ಇದು ವಿವಿಧ ವಿಬುಧ ಜನವಿನುತ ಜಿನಪಾದಾಂಭೋಜ ವರಪ್ರಸಾದೋತ್ಪನ
ಗಂಭೀರ ವಚನ ರಚನ ಚತುರ ಕವಿತಾ ಗುಣಾರ್ಣವ ವಿರಚಿತಮು
ವಿಕ್ರಮಾರ್ಜುನ ವಿಜಯದೊಳ್ ದಶಮಾಶ್ವಾಸಂ

---

1 ಮುಳಿಲ್ದು (ಖ.), ಮುರಲ್ದು (ಗ. ಘ.).

# ಏಕಾದಶಾಶ್ವಾಸಂ

ಕಂ ॥ ಶ್ರೀ ಯುವತಿಯನಾ ವೀರ ।
ಶ್ರೀ ಯುವತಿಗೆ ಸವತಿಮಾೞ್ಪೆನೆಂ[1]ದರಿ ನೃಪರು ।
ಳ್ಳಾಯುವೆ[2]ರಸೆಱೆ[3]ದುಕೊಂಡು ಧ ।
ರಾ ಯುವತಿಗೆ ನೆಗಟ್ದ ಹರಿಗನೊರ್ವನೆ ಗಂಡಂ ॥ ೧ ॥

ಎಂಬ ನಿಜ ಚರಿತಮಂ ಪಲ ।
ರುಂ ಬಣ್ಣಿಸೆ ಕಿವಿಯನಾಂತು ಕೇಳುತ್ತುಮಳುಂ ॥
ಬಂ ಬೀರಮೆನಿಸಿ ತನಗಿದಿ ।
ರಂ ಬಂದು ಕಡಂಗಿ ಸತ್ತರಂ ಪೊಗೞುತ್ತುಂ ॥ ೨ ॥

ವ ॥ ಅಂತು ವಿಕ್ರಾಂತ ತುಂಗನಿರ್ಪನ್ನೆಗಮಿತ್ತಲೆರಡುಂಪಡೆಯ ನಾಯಕರಱಿಯೆ ನೊಂದ ತಮ್ಮಣುಗಾಳ್ಗಳ ಕೊಂಡಾಟದಾನೆಗಳ ನೆಚ್ಚಿನ ಕುದುರೆಗಳ ಪುಣ್ಗಳ ನುಡಿಯಲುಮೋವಲುಂ ಮರ್ದುಬೆಜ್ಜರುಮನಟ್ಟಿ ತ್ತುಮಿಕ್ಕಿದ ಸನ್ನಣಂಗಳಂ ಗೆಲ್ದು ಕಣಕೆನೆ ಪೋಗುರ್ಚೆ ತಮ್ಮ ಮೆಯ್ಯೊ ಳುಡಿದಂಬುಗಳುಮನೆಲ್ಲಂ ನಟ್ಟುಡಿದ ಬಾಳ ಕಕ್ಕಡೆಯುಡಿಗಳುಮನಯ ಸ್ಕಾಂತಮಂ ತೋಱಿ ತೆಗೆಯಿಸುತ್ತುಂ ವಜ್ರಮುಷ್ಟಿಯ ಪೊಯ್ಲೊಳಂ ಬಾಳ ಕ್ರೋಳೊಳಮುಚ್ಚಳಿಸಿದ ಕಪಾಲದೋಡುಗಳಂ ಗಂಗೆಗಟ್ಟುತ್ತುಂ—

ಉ ॥ ಉನ್ನತ ಮಸ್ತಕ ಸ್ಥಳದೊಳಂಬುಗಳಟ್ದುಡಿದಿರ್ದೊಡತ್ತಮಿ ।
ತ್ತನ್ನೆಱೆ ತಂದು ಬಲ್ಡಡಿಗರಿಟ್ಟುಱೆನೊಳ್ ಕಿೞೆ ನೊಂದೆನೆನ್ನದಃ॥
ಎನ್ನದಣಂ ಮೊಗಂ ಮುರಿಯದಳ್ಕಡೆ ಬೇನೆಗಳೊಳ್ ಮೊಗಂಗಳಂ।
ಬಿನ್ನಗೆ ಮಾಡದಿರ್ದರಳವಚ್ಚರಿಯಾಗೆ ಕೆಲರ್ ಮಹಾರಥರ್ ॥ ೩ ॥

---

1 ದಾ (ಕ.), ದಂ (ಖ. ಗ.). 2 ಸರೆ (ಕ. ಖ.).

ಚಂ || ರಸಮೊಸರ್ವನ್ನೆಗಂ ತಗುಳೆ ಪಾಡುವ ಗಾಣರ ಗೇಯಮು
ಪೊಸಯಿಸೆ ಸೋಂಕು[1]ವೊಲ್ದೊಲಿಸುವೋಪಳ ಸೋಂಕು ಪ
ಜಾದಿಯೆ
ಮಸಗಿದ ಕಂಪು ಕಂಪನೊಳಕೊಂಡ[2]ಲೆವೊಂದೆಲ[3][ರೆಂಬಿ]
ಜಿಸುವು[4]ವುದಗ್ರ ವೀರ ಭಟರಾಹವ ಕೇಳಿ ಪರಿಶ್ರಮಂಗಳ

ವ || ಆಗಳ್ ಧರ್ಮನಂದನಂ ಮುಕುಂದಂಗೆ ಬಱಿಯನಟ್ಟ
ನಮ್ಮ ಸೇನಾನಾಯಕನುತ್ತಾಯಕನಾಗಿ ಗಾಂಗೇಯರಿಂದವ
ನ್ನಾರ್ಗೆ ವೀರ ಪಟ್ಟಮಂ ಕಟ್ಟುವಂ ಪೇಱಿಮೆನೆ—

ಕಂ || ಬೇಳ್ಪೆಯ ಕೊಂಡದೊಳುರ್ಚಿದ |
ಬಾಳ್ವೆರಸರಿ ಬಲಮನರಿಯಲೆಂದಂಕದ ಕ ||
ಟ್ಟಾಳ್ವೆರನತಿ ಬಲಂ ನಿನ |
ಗಾಳ್ವೆಸಕೆಂದಿರ್ದನಲ್ತೆ ಧೃಷ್ಟದ್ಯುಮ್ನಂ

ವ || ಎಂಬುದುಮೀಕಜ್ಜಮೆನ್ನ ಮನದೊಳೊಡಂಬಟ್ಟ ಕ
ತನೆ ವೀರಪಟ್ಟಕ್ಕೆ ತಕ್ಕನೆಂದು ಧರ್ಮನಂದನಂ ದ್ರುಪದನಂದನ
ಯನಟ್ಟಿ ಬರಿಸಿ ಪಿರಿದುಮೊಸಗೆನೆರಸು ತಾನೆ ವೀರ ಪಟ್ಟಮುಂ ಕಟ್ಟ

ಕಂ || ಆ ಸಮರ ಮುಖದೊಳೆಸೆವರಿ |
ಕೇಸರಿಯ ವಿರೋಧಿ ರುಧಿರ ಜಲನಿಧಿವೊಲ್ ಸಂ ||
ಧ್ಯಾಸಮಯಮೆಸೆಯೆ ತಟ ತಟ |
ನೇಸಱ್ ಮೂಡುವುದುಮೊಡ್ಡಣಕ್ಕೆಟ್ಟಿಂದರ್

ವ || ಅಂತಜಾತಶತ್ರು ಮುನ್ನಮೆ ಬಂದೊಡ್ಡಿ ಶತ್ರು ಬ
ನಿಧಿಯಳ್ಳಾಡೆ ವಿಳಯ ಕಾಳಾನಿಳನೆ ಬೀಸುವಂತೆ ಕೆಯ್ವೀಸಿದಾಗ

---

1 ವಲ್ಲಿಸಿಸುವೋ (ಕ.), ಪೊಲ್ದಿಸಿಸುವೋ (ಖ). 2 ತಿವೊಂದೆ
ತಿಯೆಂದಲ (ಖ), ತಿಯೊಂಪಲ (ಗ.), ತಿಯೊಂದಲಿ (ಘ.), 3 ರು
(ಕ.), ರುಂಪಿವಾದು (ಖ. ಗ. ಘ.). 4 ದು(ಕ. ಘ.).

ಮ || ಚತುರಂಗಂ ಚತುರಂಗ ಸೈನ್ಯದೊಳ[1]ಡು [ರ್ತುಂ] ತಿಱಿನೆಯ್ತಂದು ತಾ |
ಗಿ ತಡಂಮೆಟ್ಟದೆ ಕಾದೆ ಬಾ[2]ಳ್ಗಳುಡಿಗಳ್ ಜೀಱಿ[3]ಟ್ಟು [3]ನೂರ್ತಾಗಿ ಶೋ ||
ಣಿತ ಧಾರಾಳಿಗಳುರ್ಚಿ ಪೆರ್ಚಿ ಸಿಡಿಯಲ್ ತೇಂಕಲ್ ವಿಮಾನಂಗಳ
ಳ್ಕಿ ತಗುಳ್ದಾಗಳೆ ಮತ್ತಮತ್ತ ತಳರ್ದರ್ ದೇವರ್ ನಭೋಭಾಗ |
ದೊಳ್ || ೭ ||

ವ || ಆಗಳೆರಡುಂ ಪಡೆಯ ನಾಯಕರೊಂದೊರ್ವರೊಳ್ ತಾಗಿ ಕಿಡಿಗುಟ್ಟಿದಂತೆ ಕಾದುವಾಗಳಭಿಮನ್ಯು ಉಗ್ರ ತೇಜನಪ್ಪ ಮಗಧ ತನೂಜನನೊಂದೆ [4]ಪಾಱಿಯಂಬಿನೊಳ್ ಕೆಯ್ಯ ಕೂಸನಿಕ್ಕುವಂತಿಕ್ಕುವುದುಂ ಪೆಪ್ಪಿಂಗೆ ನೆಪ್ಪುಗೊಳ್ಳದೆ ಮಾಣೆನೆಂಬಂತೆ ಬಕಾಸುರನಮಗನಳಂಭೂಷ ರ್ಜುನನ ಮಗನಿಳಾವಂತನನಂತಕ ಲೋಕಮನೆಯ್ದಿಸುವುದುಂ ಘಟೋತ್ಕಚನಿಳಾವಂತನ ಸಾವಂ ಕಂಡು ಸೈರಿಸದಳಂಭೂಷನನೆಟ್ಟಿಟ್ಟು ಪುದುಮವನಳ್ಕಿ ಭಗದತ್ತನಾನೆಯ ಮಱಿಯಂ ಪುಗುವುದುಮಳಂ ಭೂಷನಂ ಪಿಂತಿಕ್ಕಿ ಭಗದತ್ತಂ ಘಟೋತ್ಕಚನಂ ಮಾರ್ಕೊಂಡು—

ಕಂ || ಉತ್ಕ್ಷೇಪ ದಹನದೊಡನೆ ಪ್ರ |
ಪತ್ಸಂಗಳ್ ಕೋಟಿ ಗಣಿತದಿಂದು[5]ಱುವಿನಮಾ ||
ದುರ್ತ್ಕಚ ದಿತಿಜನನುಱದೆ ಘ |
ಟೋತ್ಕಚನಂ ಬಿಟ್ಟು ಮೂರ್ಛೆವೋಪಿನಮೆಚ್ಚಂ || ೮ ||

ವ || ಅನ್ನೆಗಂ ವೃಕೋದರಂ ಚತುರ್ದಶ ಭುವನಂಗಳೆಲ್ಲಮುಂ ರಳ್ಚಿ ತೀರ್ರೈಸಿ ನುಂಗುವಂತು ಮುಸಕದಿಂ ಭಗದತ್ತನಂ ಮಾರ್ಕೊಂಡು—

---

1 ಉತ್ತಾರ್ತಿ (ಕ.), ಡುತ್ತಾಧಿ (ಖ.), ಡುರ್ತಾತಿ (ಗ.), ಡುರ್ತಂತಿ (ಘ.). ಳುಡಿಗಳೊಳ್ (ಕ.ಗ.), 3. ಪಾಱೀಱ (ಘ§). 4 ಪೊ (ಕ ಗ.). 5 ರ್ವಿ ಖ. ಗ. ಘ.)

ಚಂ|| ಇಸುವುದುಮೆಚ್ಚ ಶಾತ ಶರ ಸಂತತಿಯಂ ಭಗದತ್ತನೆಯ್ದೆ ಖಂ
ಡಿಸಿ ರಥಮಂ ಪಡಲ್ವಡಿಸೆ ಮಚ್ಚರದಿಂ ಗಜೆಗೊಂಡು ತಾಗೆ ಮಾ
[1]ಣಿಸಲಮರಾಪಗಾಸುತನಿದಿರ್ಚುವುದುಂ ರಥಮಟ್ಟಿ ಪೊಯ್ದು ಶ
ಕಿಸದಿದಿರಾಂತ ಸೈಂಧವನುಮಂ ಪವನಾತ್ಮಜನೋಡೆ ಕಾದಿದಂ
|| ೯

ವ|| ಅಂತು ಕಾದೆ ಸಿಂಧುರಾಜನ ಬೆಂಬಲದೊಳ್ ಕಾದಲೆಂದು ಬಂದನೂರ್ವರ್ ಕೌರವರುಂ ಭೀಮನೊಳ್ ತಾಗೆ ತಾಗಿದ ಬೇಗದಿ ದುರ್ಧರ್ಷಣ ದುರ್ಮರ್ಷಣ ದೀರ್ಘಬಾಹು ಮಹಾಬಾಹು ಚಿತ್ರೋ ಚಿತ್ರ ನಂದೋಪನಂದರ್ ಮೊದಲಾಗೆ ಮೂವತ್ತು ಮೂವರಂ ಜವಂ ಬಿರ್ದನಿಕ್ಕುವಂತಿಕ್ಕಿ ಮತ್ತಿನುಳಿದರುಮನುಳಿಯಲೀಯದೆ ಬಳಿ ದಾಗಳ್

ಮ|| ಮೊದಲಿಟ್ಟಂ ಕೊಲಲೆಂದು ಕೌರವರನಿನ್ನೇಕಿರ್ಪನಾದುರ್ಜಿಮು
ಕ್ಕದಿವಂಗಾಂ [2]ಕರಮೆಯ್ದೆ ಕೂರ್ಪನಿವರುಂ ಸತ್ತಪ್ಪರಿಂದಿಂಗೆ ಕಾ
ವುದನಾಂ ಕಾವೆನೆನುತ್ತೆ ಬೇಱ[3] ರಥಮಂ ಬಂದೇಱ ಪೋ
ಪೋ[3]ಗಲೆ
ಮೊದಱುತ್ತುಂ ಪರಿತಂದು ತಾಗಿ [4]ತಗರ್ದಂ ಗಂಗಾಸುತಂ
ಭೀಮನಂ || ೧೦

ವ|| ಅನ್ನೆಗಮತ್ತ ಸಂಸಪ್ತಕ ಬಲಮೆಲ್ಲಮನಳಱ ಪೆಳಱ ಕಿ ಱಿದುಱಿದು ಕೊಲ್ವಲ್ಲಿ ವಿಕ್ರಮಾರ್ಜುನಂ ಮುರಾಂತಕನೊಳಿಂತೆಂದ—

ಚಂ|| ಪ್ರಳಯ ಪಯೋಧಿ ನಾದಮನೆ ಪೋಲ್ತು ರಣಾನಕ ರಾವಮೀಗ
ಗ್ಗಳಮೆಸೆದಪ್ಪುದ[5]ತ್ತ ಕಱಿವಂಬಿನ ಬಲ್ಸರಿಯಿಂದಮಾ ದಿಶಾ
ವಳಿ ಮುಸುಳ್ದಿಂತು ನೀಳ್ದಪುದು ಪೋಗದೆ ಕಾದುವ ಗಂಡರಿಲ್ಲ ನಿ
ನ್ನಳಿಯನುಮಾ ವೃಕೋದರನುಮಲ್ಲದರಿಲ್ಲ ಪೆಱರ್ ಮುರಾಂತ
|| ೧೧

1 ಣ್ಪಿ (ಖ.ಗ.ಘ.). 2 ತರನೆ (ಕ.). 3 ಗೆ (ಕ.). 4 ತಗೆದಂ (ಖ.ಗ.ಘ ತೆಗೆದಂ (ಘ§.). 5 ಲ್ತೆ (ಗ.).

ಕಂ|| ಗುರು ಗುರುಪುತ್ರ ಶಲ್ಯ ಭಗದತ್ತ ನದೀಸುತರೆಂಬ ಸಂದ ಬೀ
ರರೆ ಮುಱುವಕ್ಕ[1]ಮಣ್ಣೊಡನಿರ್ವರೆ ಕೂಸುಗಳೆಂಬ ಶಂಕೆಯುಂ ||
ಪಿರಿದೆನಗೀಗಳಾದಪುದು ಮಾಣದೆ ಚೋದಿಸು ಬೇಗಮತ್ತಲ |
ತ್ತ ರಥಮನೆಂದು ಭೋರ್ಗರೆಯೆ ಬಂದನರಾತಿಗೆ ಮಿೞ್ತು
ಬರ್ಪವೋಲ್ || ೧೨ ||

ವ|| ಅಂತು ನೆಲನದಿರೆ ಬರ್ಪ ವಿಕ್ರಮಾರ್ಜುನನ ಬರವಿಂಗೆ ಕುರು ಬಲಮೆಲ್ಲಮೊಲ್ಲನುಲಿದೋಡಿ ಸುರಾಪಗಾನಂದನನ ಮಱೆಯಂ ಪೊಕ್ಕಾಗಳ್—

ಉ|| ಎಡೆ[2]ಗೊಂಡಂಕದ ಶಲ್ಯ ಸೈಂಧವ ಕೃಪ ದ್ರೋಣರ್ಕಳುಂ
ಸಾಯಕಂ |
ಗಿಡೆ ತನ್ನೆಚ್ಚ ಶರಾಳಿಗಳ್ ವಿಲಯ ಕಾಲೋಲ್ಕಂಗ[3]ಳಂ ತಾಗಿದಾ||
ಗಡೆ ತತ್ಸೂತ ರಥಾಶ್ವ ಕೇತನ ಶರವ್ರಾತಂಗಳುಂ ನುರ್ಗಿ ಕ |
ಣ್ಗಿಡೆ ಬೆನ್ನಟ್ಟಿದನಂತು ನಮ್ಮ ಹರಿಗಂ ಗಂಡಂ ಪೆಱರ್ ಗಂಡರೇ
|| ೧೩ ||

ವ|| ಅಂತತಿರಥ ಸಮರಥ ಮಹಾರಥಾರ್ಧ ರಥರ್ಕಳನಾನೆ ಮೆಟ್ಟಿದ ಕುಳುಂಪೆಯ ನೀರಂತೆ ದೆಸೆ ದೆಸೆಗೆ ಕೆದಱುವನ್ನಮೆಬ್ಬಟ್ಟಿದಾಗಳ್ ಸೋಲ್ತು ತನ್ನ ಬಲಮನಳುಂಬಮಾದ ವಿಕ್ರಮಾರ್ಜುನನ ಭುಜಬಲ ಮುಮಂ ಕಂಡು ಕನಕ ತಾಳಧ್ವಜಂಗೆ ಪನ್ನಗಧ್ವಜನಿಂತೆಂದಂ—

ತರಳ|| ಮುಳಿಯೆ ಬಿನ್ನಪಮುಜ್ಜ ದಾಯಿಗರೊಳ್ ವಿರೋಧಮನಿಂತು ಬ |
ಳ್ವಳನೆ ಮಾಳ್ಪುದನಂದು ನಿಮ್ಮನೆ ನಂಬಿ ಮಾಡಿದೆನಿಂತು ಗೋ||
ವಳಿಗನಂ ಗೆಡೆಗೊಂಡು ಮುಂಬಳಿದೊಟ್ಟ ಪೇಡಿಯೆ ನಿಮ್ಮನಿಂ |
ತಿಳಿಸಿ ಮದ್ಬಲಮೆಲ್ಲಮಂ ಕೊಲೆ ನೋಡುತಿರ್ಪುದು ಪಾಱಿಯೇ
|| ೧೪ ||

1 ರ (ಕ.) 2 ಗೋದಂ (ಗ. ಘ.) 3 ಳಾ (ಕ.)

ಕಂ ॥ ಮೇಳದೊಳೆಂತುಂ ಪೋ ಪೆಱ।
ರಾಳಂ ಭಿದ್ರಿಸುವೆವೆಂಬ ಪಾಂಡವರೊಳ್ ನೀಂ ॥
ಮೇಳಿಸಿ ನಣ್ಪನೆ ಬಗೆದಿರ್ ।
ಜೋಳದ ಪಾಟಿಯುಮನಿನಿಸು ಬಗೆಯಿಂ ನಿಮ್ಮೊಳ್
॥

ವ ॥ ಎಂಬುದುಂ ಸಿಂಧುತನೂಜನಿಂತೆಂದಂ—

ಮ ॥ ತ್ರಿಜಗಕ್ಕಂ ಗುರು ದೇವನಾದಿ ಪುರುಷಂ ಕೇಳೊರ್ವನೊರ್ವಂ
ಧ್ವಜಿನೀ ಧ್ವಂಸಕನಾಗಿ ಸಂದ ಕಲಿಯುಂ ಬಿಲ್ಲಾಳುಮಿನ್ನ
ದೊ
ತು ಜಗತ್ಖ್ಯಾತರನೇಳಿಪ್ಪೆ ಮಱಿಪೆನೇ ಮುಂ ಪೂಣ್ದುದಂ
ಧ್ವಜ[1]ಮುಂಬೆಂಬಿವನೆಯ್ದೆ ಸಂಧಿಸು ಜಸಂ ನಿಲ್ವನ್ನೆಗಂ ಕಾ
॥

ವ ॥ ಎಂಬುದುಮನೇಕ ಶರ ಭರಿತ ಶಕಟ ಸಹಸ್ರಮನೊ
ಮಾಡಿ ಗಾಂಗೇಯನ ಪೆಱಗೆ ನಿಲಿಸಿದಾಗಳಮರಾಪಗಾನಂದನನು
ರೇಂದ್ರನಂದನನುಮೊರ್ವರೊರ್ವರಂಗಱಿಸನ್ನೆಗೆಯ್ದು ಕಾದು
ಳಂಬರ ತಳದೊಳೆಲ್ಲಂ ಬಿಳಿಯ ಮುಗಿಲ್ಗಳ ಚೌಪಳಿಗೆಗಳೊಳ್ ಬಂ
ದೇವ ವಿಮಾನಂಗಳುಮೊಡನೊಡನೆ ಕಲಂಕೆ ಕುಲ ಗಿರಿಗಳುಂ
ಗಳುಮೊಡನೊಡನೆ ತಾಗಿದಂತೆ ತಾಗಿದಾಗಳ್—

ಮ ॥ ಉಪಮಾತೀತದ ಬಿಲ್ಲ ಬಲ್ಮೆ ಸಮಸಂದೊಂದೊರ್ವರೊಳ್

ರ್ವಿ ಪರವ್ಯೂಹ ಭಯಂಕರಂ ನೆಗೆದು ಪಾರ್ದಾರ್ದೆಚ್ಚೊಡಂ

1 ನಂಬೆಂ (ಖ.), ಮಂದೆಂ(ಗ.). ವೆಂದೆಂ (ಘ.)

ಟ್ಟೆ ಪಳಂಚುತ್ತೆ ಸಿಡಿಲ್ದ ತೋರಗಿಡಿಯಿಂದೊಂದೊಂದಱೊಳ್
ಬೇವುದುಂ ।
ತ್ರಿಪುರಂಬೊತ್ತಿಸಿದಂತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಂಡಳಂ
॥ ೧೭ ॥

ವ ॥ ಅಂತು ಬ್ರಹ್ಮಾಂಡಮುರಿಯೆ ಕಾದೆ—

ಂ ॥ ನಡಪಿದನಜ್ಜನೆಂದು ವಿಜಯಂ ಕ[1]ಡುಕೆಯ್ದಿಸನೆನ್ನ ಮಂಮನಾಂ ।
ನಡಪಿದನೆಂದು ಸಿಂಧು ತನಯಂ ಕ[1]ಡುಕೆಯ್ದಿಸನಿಂತು ಪಾಡು
ಗಾ ॥
ದೊಡನೊಡನಿರ್ವರುಂ ಮೆಱೆಯಲೆಂದೆ ಶರಾಸನ ವಿದ್ಯೆಯಿಂ ಪಡ।
ಲ್ವಡಿಸಿದರೆತ್ತಮಿತ್ತಮಿದಿರೊಳ್ ಮಲೆದೊಡ್ಡಿದ ಚಾತುರಂಗಮಂ
॥ ೧೮ ॥

ವ ॥ ಅಂತು ಕಿಱಿದು ಪೊಟ್ತು ಕೆಯ್ಗಾದು ಕಾದೆ ಸರಿತ್ಸುತನ
ರಿವ ಸರಲ ಮೞೆಯೊಳೞಿದ ನಿಜ ವರೂಥಿನಿಯ ಸಾವುಂ ನೋವು
ೀವಮಂ ಮಾಡೆ—

ಂ ॥ ಮುನಿದೆರಡಂಬಿನೊಳ್ ರಥಮುಮಂ ಪದವಿಲ್ಲುಮನೆಯ್ದು ಪಾರ್ಥ
ನೆ ।
ಕ್ಕನೆ ಕಡಿದಿಂದ್ರ ನಂದನನಳುರ್ಕೆಯಿನಾರ್ದೊಡೆ ದಿವ್ಯ ಸಿಂಧು
ನಂ ॥
ದನನಿರದೇಱೆ ಬೇಱೆ ರಥಮಂ ಪೆಱತೊಂದು ಶರಾಸನಕ್ಕೆ ಮೆ ।
ಲ್ಲನೆ ನಿಡುದೋಳನುಯ್ದು ಕರಮುಚ್ಚರಿಯಾಗೆ ಕಡಂಗಿ [2]ಕಾದಿದಂ
॥ ೧೯ ॥

ವ ॥ ಅಂತು ತೋಡುಂ ಬೀಡುಂ ಕಾಣಲಾಗದೆ[3]ರ್ದೆಗಾಯ[ಲೆಕ್ಕೆ]
ನೆಂಬತ್ತು ನಾಲ್ಕು ಲಕ್ಕ ಬಂಡಿಯೊಳ್ ತಂಡ ತಂಡದೆ ತೀವಿದ ಕಾಂಡ

1 ಡಿ (ಖ. ಗ. ಘ.). 2 ತಾಗಿ (ಘ). 3 ದೆಗಾಯಲಕ್ಕಿಯೆಂ (ಕ.)
ಾಯಲಿಕ್ಕಿಯಿನೆಂ (ಖ. ಗ.), ದೆಯಿಲಿಕ್ಕಿಯಿಂನೆಂ (ಘ.).

ಪ್ರಳಯಾನಳ ವಿಸ್ಫುಲಿಂಗೋಪಮಾನಂಗಳಪ್ಪ ನಿಶಿತ ಕಾಂಡಂಗ
ದೊಡ್ಡಿದ ಚತುರ್ಬಲಂಗಳ ಮೆಯ್ಯೊಳ್ ರೋಮ ರೋಮಂದಪ್ಪದೆ
ವನ್ನಮೆಚ್ಚು ಪಯಿಂಛಾಸಿರ್ವರ್ ಮಕುಟ ಬದ್ಧರುಮನೊಂದು
ಮದದಾನೆಯುಮಂ ಮೂಱುಲಕ್ಕರಥಮುಮನೊಂದು ಕೋಟಿತುರ
ತುರಂಗಂಗಳುಮಂ ಪದಿನೆಂಟು ಕೋಟಿಪದಾತಿಯುಮನಲಸದೆಪೇಸೆ
ಕೊಂದು ಪರಶುರಾಮನಲ್ಲಿ ಪಡೆದ ದಿವ್ಯಾಸ್ತ್ರಂಗಳನೊಂ[1]ದನೊ
ಸೂಟಿಕೊಳಿ ತೊಟ್ಟು—

ಕಂ ॥ ನುಡಿವಳಿಗೆ ನರನ ರಥಮಂ ।
ಪಡುವೆಣ್ಗಾವುದುವರಂ ಸಿಡಿಲ್ವಿನಮೆಚ್ಚ ॥
ಚ್ಚುಡಿಯೆ ಭುಜಬಲಡೆ ಹರಿಯುರ ।
ದೆಡೆಯಂ ಬಿರಿಯೆಚ್ಚು ಮೆಱೆದನಳವಂ ಭೀಷ್ಮಂ ॥

ವ ॥ ಆಗಳ್—

ಕಂ ॥ ದೇವಾಸುರ[2]ದೊಳಮಿಂದಿನ ।
ನೋವಂ ನೊಂದಱಿಯೆನುೞಿದ ಕೆಯ್ದುವಿನೊಳಿವಂ ।
ಸಾವನೆ ಸೆರಗಂ ಬಗೆದೊಡೆ ।
ಸಾವಾದಪುದೆಂದು ಚಕ್ರಿ ಚಕ್ರದೊಳಿಟ್ಟಂ ॥

ಇಟ್ಟೊಡೆ ತನಗಸುರಾರಿಯ ।
ಕೊಟ್ಟ ಮಹಾ ವೈಷ್ಣವಾಸ್ತ್ರಮಂ ಗಾಂಗೇಯಂ ॥
ತೊಟ್ಟೆಸುವುದುಮೆರಡುಂ ಕಿಡಿ ।
ಗುಟ್ಟಿ ಸಿಡಿಲ್ ಸಿಡಿಯೆ [3]ಪೋರ್ದುವಂಬರತಳದೊಳ್ ॥

ಪೋರ್ವುದುಮಿಂ ಪೆಱತಂಬಿಂ ।
ತೀರ್ವುದೆ ಪಗೆಯೆಂದು ಪಾಶುಪತಮಂ ಪಿಡಿಯಲ್ ॥

1 ದೊಂದುಸೂಟಿನ್ಸಾ (ಕ. ಖ.), ದೊಂದು ಸೂ (ಘ.). 2 ರೊ (
ನೊ (ಖ.). 3 ಪೊಣ (ಕ. ಖ.).

[1]ಪಾರ್ವುದುಮರ್ಜುನನಾಗಳ್ ।
ಬೇರ್ವೆರಸು ಕಿಟಿಲ್ಕೆ ಬಗೆಯೆ ಸುರರೆಡೆವೊಕ್ಕರ್ ॥ ೨೩ ॥

ವ ॥ ಆ ಪ್ರಸ್ತಾವದೊಳ್—

ಕಂ ॥ ಎನ್ನ ಮನಸುರಾ[2]ರಿಯ ಪಿಡಿ ।
ವುನ್ನತ ಕರಚಕ್ರಮೆಂದು ಭೀಷ್ಮಂ ತಱಿಗುಂ ॥
ಮುನ್ನ ಮಡಂಗುವೆನೆಂಬವೊ ।
ಳನ್ನೆಗಮಸ್ತಾಚಳಸ್ಥನಾದಂ ದಿನಪಂ ॥ ೨೪ ॥

ವ ॥ ಆಗಳೆರಡುಂ ಪಡೆಗಳಪಹಾರ ತೂರ್ಯಂಗಳಂ ಬಾಜಿಸಿ
ನ್ನೊತ್ತಿದ [4]ವೇಳೆಗಳ್ ಸಮುದ್ರಂಗಳಂ ಪುಗುವಂತೆ ತಂತಮ್ಮ ಬೀಡು
ಪೊಕ್ಕರಾಗಳ್—

ಕಂ ॥ ಬರಿಸಿ ಮನೆಗಸುರವೈರಿಯ ।
ನರಸಂ ಭೀಷ್ಮಂಗೆ ಚಕ್ರಮಿಂತೇಕೆ ಮೊಗಂ ॥
ದಿರಿದುದೊ ನಿಮ್ಮಂ ಪಿಡಿದೆನ ।
ಗರಿದೆನಲರಿದುಂಟೆ ಧುರದೊಳೇನಸುರಾರೀ ॥ ೨೫ ॥

ಕಂ ॥ ಬೆಸಸೆನೆ ನುಡಿದಂ ಮುರನೆಂ ।
ಭಸುರನನೆನಗಾಗಿ ಕಾದಿ ಭೀಷ್ಮಂ ಪಿಡಿದೊ ॥
ಪ್ಪಿಸಿದೊಡೆ ವೈಷ್ಣವ ಬಾಣಮ ।
ನ್ನೊಸೆದಿತ್ತೆನ[5]ದಂ ಗೆಲಲ್ಕೆ ಕೆಯ್ದುಗಳೊಳವೇ ॥ ೨೬ ॥

ಭೇದದೊಳಲ್ಲದೆ ಗೆಲಲರಿ ।
ದಾದಂ ಸುರ ಸಿಂಧುಸುತನನಿಂದಿರುಳೊಳ್ ನೀಂ ।

---

1 ಸಾ (ಗ. ಘ.). 2 ರಾತಿ ಮ । ಹೋ (ಕ.), ರಾತಿಯು । ವು (ಖ.).
ಂದೊ (ಕ. ಖ.). 4 ಪೊ (ಕ.). 5 ವಂಗೆ ಗೆಲ್ವ (ಕ.) ದಂಗೆ ಗೆಲುವ
ಗ. ಘ.)

ಭೇದಿಸೆನೆ ನೃಪತಿಯೊರ್ವನೆ।
[1]ಆದರದಿಂ ಬಂದು ಸಿಂಧುಸುತನಂ ಕಂಡಂ

ಕಣ್ಬು ಪೊಡೆವಟ್ಟು ನಯಮೆರ್ದೆ।
ಗೊಣ್ಡೆರೆ ಪತಿ ನುಡಿದನೆನಗೆ ದೇವರ್ ಕಲುಷಂ॥
ಗೊಣ್ಡಾಗಳ್ ಕ್ರಾವರ್ ಕಣೆ।
ಗೊಣ್ಡವೊಲೆಂದೆಂಬ ವಾತಿನಂತಾಗಿರದೇ।

[2]ತೊಂಬಯ್ಸಾಸಿರ್ವರ್ ನಿ।
ಮ್ಮಂಬಿನ ಬಂಬಲೊಳೆ ಮುಕುಟಬದ್ಧರ್ ಮಡಿದರ್
ನಂಬಿಂ ನಂಬಲಿಮಿಂದಿಂ।
ಗೊಂಬತ್ತು ದಿನಂ ದಲೆಮ್ಮ ಬೆನ್ನಲೆ ನಿಂದಿರ್ ।

ಚಕ್ರಿಯ ಚಕ್ರದೊಳಂ ತೊಡ।
ರ್ದಾಕ್ರಮಿಸಿದುದೆಚ್ಚ ನಿಜ ಪತತ್ರಿ ದಲೆಸೆ ನಿ॥
ಮ್ಮೀ ಕ್ರಮ ಕಮಲಕ್ಕೆಜಿಗದೆ।
ವಕ್ರಿಸಿ ಭೂಚಕ್ರದೊಳಗೆ ಬಾಳ್ವರುಮೊಳರೇ ।

ಸಾವೆ ನಿಮತಿಚ್ಚೆಯೆನೆ ಪೊಣ।
ರ್ದಾವಂ ತಳ್ತಿಱಿದು ಗೆಲ್ವನೆಮಗದಱಿಂ[3]ದಂ॥
ಸಾವು ದಿ[4][ಟ]ಂ ನಿಮ್ಮಡಿ ಕೊಲೆ।
ಸಾವುದು ಲೇಸಲ್ತೆ ಸುಗತಿವಡೆಯಲ್ಕಕ್ಕುಂ ॥

ವ॥ ಎಂದೊಡದೆಲ್ಲಮನೆಯ್ದೆ ಕೇಳ್ದು ಕರುಣಾರಸ ಹೃದಯ ಮಮ್ಮನ ಮೊಗಮಂ ಕೂರ್ಮೆಯಿಂ ನೋಡಿ ಕಣ್ಣ ನೀರಂ ನೆಗಪಿ

ಚಂ॥ ಜಗದೊಳ್[5]ವಧ್ಯನಂ ಗೆಲಲೆ ಬಾರದದಾದೊಡಮೇಂ ಶಿಖಂಡಿ
ಟ್ಟಗೆ ಕೊಳೆ ಬಂದು ಮುಂದೆ ನಿಲೆ ಸಾವೆನಗಪ್ಪುದು
ನಾಳಿನೊಂದು

1 ಪಾ (ಖ. ಗ, ಘ.). 2 ಒಂ (ಕ. ಘ§.), ಎಂ (ಖ. ಗ. ಘ.) (ಕ.). 4 ದ (ಸ). 5 ವಂಧ್ಯ(ಖ. ಗ. ಘ.).

ಳಿಗದೊಳಿದಂ ನರಂಗಱಿಪದೀ ತೆಱದಿಂ ನೆಗೞ್ದೆಯ್ದೆವೀರ ಲ।
ಕ್ಷ್ಮಿಗೆ ನೆಲೆಯಾಗು ಪೋಗೆನೆ ನೃಪಂ ಪೊಡೆವಟ್ಟು
ಮನೋನುರಾಗದಿಂ ॥ ೩೨ ॥

ವ॥ ಬಂದು ಮಂದರಧರಂಗೆ ತದ್ವೃತ್ತಾಂತಮನೆಲ್ಲಮನಱಿಪಿ
ತ ಮನನಾಗಿ ಪವಡಿಸಿದಾಗಳ್—

ಚಲ ಚಲದಾಂತು ಕಾದುವ ಸುಯೋಧನ ಸಾಧನದೊಡ್ಡುಗಳ್,
ಕೞ।
ಲ್ದಲಱ್ ತೆರಳ್ದು ತೂಳ್ದು ಬಿಱುತೋಡೆ ಗುಣಾರ್ಣವನಿಂದ
ಮಾಜಿಯೊಳ್।
ಕೊಲಿಸಿ ಸಮಸ್ತ ಧಾತ್ರಿಯುಮನಾಳಿಪೆವೆಂದುಲಿವಂತೆ ಪಕ್ಕಿಗಳ್।
ಚಿಲಿಮಿಲಿಯೆಂಬ ಪೊೞ್ತುಱೊಳೆ ಬಂದುಱದೊಡ್ಡಿದನಂತಕಾ
ತ್ಮಜಂ ॥ ೩೩ ॥

ವ॥ ಆಗಳ್ ಕುರುಧ್ವಜಿನಿಯುಮನೇಕ ಶಂಖ ಕಾಹಳ ಭೇರೀ
ಝುಲ್ಲರೀ ಮೃದಂಗ ತೂರ್ಯಂಗಳಂತಕಾಲಾಂತಕ ವಿಕಟಾಟ್ಟ
ಂಗಳೆಂಬಂತೆ ಮೊೞಗೆ ಮಲೆದು ಬಂದೊಡ್ಡಿ ನಿಂದಾಗಳ್—

ಕಂ॥ ಉಭಯ ಬಲದರಸುಗಳ್ ರಣ।
ರಭಸಂಗಳ್ವೆರಸು ಮುಳಿದು ಕೆಯ್ವೀಸೆ ಲಯ॥
ಕ್ಷುಭಿತ ಜಲನಿಧಿ ನಿನಾದಮ।
ನಭಿನಯಿಸಿದುದೊಗೆದು ನೆಗೆದ ಸಮರಾರಾವಂ ॥ ೩೪ ॥

ಇಸುವ ಧನುರ್ಧರರಿಂ ಪಾ।
ಯಿಸುವ ದಳಂಗಳಿನಗುರ್ವು ಪರ್ವುವಿನಂ ಚೋ॥
ದಿಸುವ ರಥಂಗಳಿನೆಂಟುಂ।
ದೆಸೆ ಮಸುಳ್ವಿನಮಿಱಿದುವಾಗಳುಭಯ ಬಲಂಗಳ್
॥ ೩೫ ॥

ಅಱಿದಱ್ಗಿದ ಕರಿ ಘಟೆಗಳ।
ಬಳಗದಿನುಚ್ಚಳಿಸಿ ಮೊರೆವ ನೆತ್ತರ [1]ತೆರೆಗಳ್ ॥
ಸುೞಿಸುೞಿದೊಡವರಿದುವು ಕ।
ಲ್ಪೞಿಯೊಳ್ ಘೋರ್ಗರೆದು ಪರಿವ ತೊಱೆ[3]ಗಳ
ತೆಱದಿಂ ॥ ೩೭

ವ॥ ಅಂತು ಚಾತುರ್ದಂತವೊಂದೊಂದಱ[3]ೊಳೋರಂತೆ ನಡುವ
ಲ್ಪರಂ ಕಾದುವುದುಂ ನಾವಿಂದಿನನುವರಮನನಿಬರುಮೊಂದಾಗಿ ಭೀ
ರೊಳ್ ಕಾದುವಮೆಂದು ಸಮಕಟ್ಟಿ ಧರ್ಮಪುತ್ರಂ ಕದನತ್ರಿಣೇತ್ರ
ಮುಂದಿಟ್ಟು ಸಮಸ್ತ ಬಲಂಬೆರಸು ಕಾದುವ ಸಮಕಟ್ಟಂ ದುರ್ಯೋಧ
ನಱಿದು—

ಚಂ॥ ಕುರುಬಲಮೆಂಬುದೀ ಸುರನದೀಜನ ತೋಳ್ವಲಮೆಂಬ ವಜ್ರ ಪ
ಜರದೊಳಗಿರ್ದು ಬಲ್ದುಪುದು ಪಾಂಡವ ಸೈನ್ಯಮುಮಿಂದು
ಭೀಷ್ಮರೊ
ರ್ವರೊಳಿರದಾಂತು ಕಾದಲವರಂ ಪೆಱಗಿಕ್ಕಿ ಕಡಂಗಿ ಕಾದಿ ನಿ
ತ್ತರಿಸುವೆನೆಂದು ಪಾಂಡವ ಬಲಕ್ಕಿದಿರಂ ತಱಿಸಂದು ತಾಗಿದಂ
॥ ೩೮

ವ॥ ಅಂತು ತಾಗುವುದುಂ ಸಾತ್ಯಕಿ ಕೃತವರ್ಮನೊಳ್ ಯುಧಿಷ್ಠಿ
ಶಲ್ಯನೊಳ್ ಸೌಭದ್ರನಶ್ವತ್ಥಾಮನೊಳ್ ಸಹದೇವಂ ಶಕುನಿಯೊ
ನಕುಲಂ ಚಿತ್ರಸೇನನೊಳ್ ಚೇಕಿತಾನಂ ಸೈಂಧವನೊಳ್ ಘಟೋತ್ಕ
ಕೃಪನೊಳ್ ಭೀಮಸೇನಂ ಕೌರವ[2][ನೊ]ಳ್ ಕಳಿಂಗರಾ
ಪಾಂಚಾಳರಾಜನೊಳ್ ಅತಿರಥಮಥನಂ ದ್ರೋಣಾಚಾರ್ಯರೊ
ಅವರವರೊಳದಿರದಾಂತಾಗಳ್—

1 ತೊಱೆ[3] (ಕ.). 2 ರೊ (ಸ.).

ಕಂ॥ ನಡುವಿಡುವುರ್ಚುರ್ವ ವಾ[1]ರ್ದರಿವ ನೇ[2]ರ್ವ ಪಳಂಚುವ ಪೋರ್ವ ಬಾಣದಿಂ।
ದುಡಿದು ಸಿಡಿಲ್ದು ಸೂಸಿ[3]ಯೆ ಕಟಿಲ್ದು ಬಟಿಲ್ದು ಸಡಿಲ್ದು ಜೋಲ್ದು ನೇ॥
ಲ್ದುಡಿದ ನೊಗಂ ಧ್ವಜಂ ಪಲಗೆ ಕೀ[4]ಲ್ ಕವರಚ್ಚು ತುರಂಗಮುಂ ರಥಂ।
ಕಿಡೆ ಕವರಿಂದಗುರ್ವನೊಳಕೊಂಡಿರೆ ತಳ್ತಿಱಿದರ್ ಮಹಾರಥರ್ ॥ ೩೮ ॥

ವ॥ ಅಂತು ಕಿಡಿಗುಟ್ಟಿದಂತೆ ತಳ್ತಿಱಿಯೆ ಜಗದೇಕಮಲ್ಲಂಗೆ ಮೂರ್ಮಲೆಯಲಾಱದೆ ಕುರುಬಲಮೆ[5]ಲ್ಲಮೊಲ್ಲನುಲಿದೋಡಿ ಭೀಷ್ಮರ ಮಱೆ[3]ಯಂ ಪೊಕ್ಕಾಗಳ್

ಕಂ॥ ಧವಳ ಹಯಂ ಧವಳ ರಥಂ।
ಧವಳೋಷ್ಣೀಷಂ ಶಶಾಂಕ ಸಂಕಾಶ ಯಶೋ॥
ಧವಳಿತ ಭುವನಂ ತಾಗಿದ।
ನವಯುವದಿಂ ಬಂದು ಧರ್ಮತನಯನ ಬಲದೊಳ್ ॥ ೩೯ ॥

ವ॥ ಅಂತು ತಾಗಿದ ಸಿಂಧುನಂದನನ ಕೋಪ[6]ಶಿಖಿ ಶಿಖಾ ಕಳಾಪಂಗಳೊಳ್ ಪುಡುಪುಡ[7]ನಟ್ಟಿ ಸಾಯಲೆಂದು ಪಾಯ್ವ ಪತಂಗಂಗಳಂತೆ ಸೋಮಕ[8]ಶ್ರೀಜಯ ಪ್ರಮುಖ ನಾಯಕರೊಂದಕ್ಷೋಹಿಣೀ ಬಲಂಬೆರಸು ತರಂಗೆಯ್ದಾಂತೊಡೆ—

---

1 ರ್ವ (ಕ.). 2 ಲ್ವ (ಕ.), ಳ್ವ (ಖ.), 3 ದ (ಖ. ಗ. ಘ.). 4 ಲ್ಮಡವ (ಕ.). 5 ರಸ (ಖ.), ರ (ಗ.), ದಶ (ಘ.). 6 ಶಿಖಾಕಳಾ (ಕ.), ಶಿಖಾಳಾ. (ಖ. ಗ.). 7 ನಟಿಱದು (ಕ.), ಳ್ಗಿ (ಗ.), ತಳ್ಗಿ (ಘ.). 8 ತ್ರಿ (ಖ. ಗ.), ಶೃಂ (ಘ)

ವ॥ ಶರ ಸಂಧಾನದ ಬೇಗಮಂಬುಗಳ[1]ನಂಬೀಂಬಂತೆ ಮೇಣಂಬಿನಾ
ಗರಮೆಂಬಂತೆನೆ ಪಾಯ್ವರಾತಿ ಶರ ಸಂಘಾತಂಗಳಂ ನುರ್ಗಿ ನ
ರ್ದರಿ[2][ದ]ಟ್ಟುಂಬರಿಗೊಂಡು ಕೂಡೆ ಕಡಿದಂತಾ ಸೈನ್ಯಮಂ
ಪರ್ವಿಗೊ
ಟ್ಟುರಿಗೊಂಡುರ್ವಿದುವಾ ರಸಾತಳಮುಮಂ ಗಾಂಗೇಯನಸ್ತ್ರಾ
ಳಿಗಳ್ ॥ ೪

ವ॥ ಅಂತು ಭೀಷ್ಮಂ ಗ್ರೀಷ್ಮಕಾಲದಾದಿತ್ಯನಂತೆ ಕಾಯ್ದ
ಕಾಲದಂತಕನಂತೆ ಕೆಳರ್ದು ವಿಳಯ ಕಾಲಮೇಘದಂತೆ ಮೊಟಗಿ ಮ
ಪ್ರಳಯ ಭೈರವನಂತೆ ಮಸಗಿ ಪಯಿಂಛಾಸಿರ್ವರ್ ಮಕುಟಬದ್ಧ
ಕೊಂದಾಗಳ್—

ಚಂ॥ ಮಣಿ ಮಕುಟಾಳಿಗಳ್ವೆರಸುರುಳ್ದ ನರೇಂದ್ರ ಶಿರಂಗಳೊಳ್ಪಣಾ
ಮಣಿಗಳ ದೀಪ್ತಿಗಳ್ ಬೆಳಗೆ ಧಾತ್ರಯಿನೊಯ್ಯನೆ ಕಂಡಿ ವ
ಕಣ
ತಣಿವಿನಮುಂದುನಿಂದಿಱಿದ ಕೊಳ್ಗುಳನಂ ನಡೆ ನೋಟ್ಟಿಹೀಂ
ರೊ
ಸೆಣಸಿದು[4]ವೆಂದೊಡೇವೊಗಟ್ಟುದೇರ್ವಸನಂ ಸುರಸಿಂಧು ಪುತ್ರ
॥ ೪

ವ॥ ಅಂತು ಸೋಮಕ ಬಲಮೆಲ್ಲಮಂ ಪೇಟ[3] ಪೆಸರಿಲ್ಲದ
ಕೊಂದು ಶ್ರೀಜಯ ಬಲಕ್ಕಪಜಯಮಾಗೆ ಕೊಂದುವೋಡಿಸಿಯುವಿ
ಗೆಲ್ದ ಮಲ್ಲನಂತಿರ್ದಾಗಳ್ ಜಗದೇಕಮಲ್ಲಂ ಮೊದಲಾಗೆ ವಿ
ವಿರಾಟಜ ದ್ರುಪದ ದ್ರುಪದಜ ಚೇಕಿತಾನ ಯುಧಾಮನ್ಯೂತ್ತಮೌ
ಸೌಭದ್ರ ಘಟೋತ್ಕಚ ಭೀಮಸೇನ ನಕುಲ ಸಹದೇವ ಸಾತ್ಯಕಿ ಪ
ಪಾಂಡವಪ್ರಮುಖನಾಯಕರೆಲ್ಲರುಂಬೆರಸು ಧರ್ಮಪುತ್ರಂ ಶಿಖಂಡಿ

1 ವಂ (ಕ.), ಮಂ (ಖ.). 2 ವ (ಸ.). 3 ನೊ (ಕ.), ಡೊ (
4 ದೆಂ (ಖ. ಗ. ಘ.)

ಯುಂದಿಟ್ಟುಕೊಂಡು ಬಂದು [1]ಪೇಂಕುಳಿಗೊಂಡ ಸಿಂಹಮುಂ ಮುತ್ತುವಂತೆ
ಸುತ್ತಿಮುತ್ತಿದಾಗಳ್—

ಉ || ಅಂಬರಮೆಲ್ಲಮುಂಬಿನೊಳೆ ಪೂೞೆ[3] ಮಹೀಭುಜರೆತ್ತಮೆಚ್ಚ ಕಿ |
ತ್ತಂಬುಗಳೆತ್ತಮುವ್ವಳಿಸೆ ಮಾಣದವಂ ಕಡಿದಿಕ್ಕಿ ತನ್ನ ನ ||
ಲ್ಲಂಬುಗಳಿಂದಮಾರ್ದಿರದ[2]ಡುರ್ತಿಸೆ ಭೂಭುಜರೆಲ್ಲಮಲ್ಲಿ ಬಿ |
ಲ್ಲುಂ ಬೆಱಗಾಗೆ ಬಂದು ಪೊಣರ್ದಂ ಸೆರಗಿಲ್ಲದೆ ವಿಕ್ರಮಾರ್ಜುನಂ
|| ೪೨ ||

ವ|| ಅಂತು ಪೊಣರ್ದಾಗಳೆಮ್ಮ ಮಮ್ಮಂಗಮೆಮಗಮೀಗಳನುವರಂ
ೂರೆ[3]ಯಾಯ್ತೆಂದು ಪರಶುರಾಮನ ಕೊಟ್ಟ ದಿವ್ಯಾಸ್ತ್ರಂಗಳನೊಂದ
ೂಂ[4]ದು ಸೂೞೊಳೆ ತೊಟ್ಟೆಚ್ಚಾಗಳ್—

ಂ || ಜ್ವಳನ ಪತತ್ರಿಯಂ ಕಡಿದು ವಾರುಣ ಪತ್ರಿಯಿನೈಂದ್ರ ಬಾಣಮುಂ|
ಕಳೆದು ಸಮೀರಣಾಸ್ತ್ರದಿನಿದಿರ್ಚಿದ ಭೂಭುಜರೆಲ್ಲರಂ ಭಯಂ ||
ಗೊಳಿಸಿ ನಿಶಾತ ವಜ್ರಶರದಿಂ ಸುರರಂಬರದೊಳ್ ತಗುಳ್ದು ಬಿ |
ಚ್ಚಳಿಸೆ ನದೀಜನುಚ್ಚಳಿಸೆ ಕಾದಿದನೇಂ ಕಲಿಯೋ ಗುಣಾರ್ಣವಂ
|| ೪೩ ||

ವ|| ಅಂತವೋಘಾಸ್ತ್ರ ಧನಂಜಯಂ ತನ್ನವೋಘಾಸ್ತ್ರಂಗಳಂ
ಡಿದೊಡೆ ಸಾಮಾನ್ಯಾಸ್ತ್ರಂಗಳೊಳ್ ಧರ್ಮಪುತ್ರಂಗೆ ತನ್ನ ನುಡಿದ
ುಡಿವಳಿಯಂ ನೆನೆದಲ್ಲಳಿಗಾಳೆಗಂಗಾದೆ—

ಂ|| ಕಡಿದನುದಗ್ರ ನಾಯಕರ ಸಾಯಕಮೆಲ್ಲಮನಾ ಶಿಖಂಡಿ ಪೊ |
ಕ್ಕಡಿಗಿಡೆ ಬಂದು ಮುಂದೆ ನಿಲೆಯುಂ ಮೊಗಮುಂ ನಡೆ
ನೋಡಿಯಾತನಾ ||
ದೊರ್ಡನೊಡನೆಚ್ಚೊಡೆಚ್ಚ ಮೊನೆಯಂಬುಗಳಟ್ಟಿ ಡಿವೋಗೆಯುಂ
ಮನಂ |
ಗಿಡನವನಾಂಕೆಗೊಳ್ಳನಗಿಯಂ ಸುಗಿಯಂ ಸುರ ಸಿಂಧುನಂದನಂ
|| ೪೪ ||

1 ಪೆಂ (ಕ.). 2 ೞು (ಕ.) 3 ಯುಲಾ (ಕ. ಖ.). 4 ದೆ. (ಖ. ಗ. ಘ.).

ಕ್ಕಿದ ಬಗೆಗಂಡಿರೇ ಮಗನೆ ನೀಂ ಪಗೆಯಂ ತಱಿದೊಟ್ಟು ನೆ
ನ್ನದೆ ಬಗೆಗೆಟ್ಟು ದಾಯಿಗರೊಳಿಂ ಮಗುಟ್ಚಿಂ
ಪುದುವಾಟ್ಟಿದೆಂಬಿರೇ ॥

ವ॥ ಎಂಬುದುಮಿಲ್ಲಿಂದಂ ಮೇಲಾದ ಕಜ್ಜಮಂ ನೀನೆ
ಬೀಡಿಂಗೆ ಬಿಜಯಂಗೆಯ್ಯಿಮೆನೆ ಪೊಡೆವಟ್ಟು ಸುಯೋಧನಂ
ನಾಗಳ್—

ಚಂ॥ ನೆರೆದ ವಿರೋಧಿ ನಾಯಕರನಾಹವದೊಳ್ ತಱಿದೊ[1]ಟ್ಟ
ಲ್ಕೊಂದಿದ್ದ
ಡ್ಡ[2]ರುಳ್ಪಿನಮಾ ಗುಣಾರ್ಣವನಡುರ್ತಿಜಿದಲ್ಲಿ ಸಿಡಿಲ್ದನೆತ್ತ
ಪೊರೆದು ನಿರಂತರಂ ಪೊಲಸು ನಾಱುವ ಮೆಯ್ಯನೆ ಕರ್ಣಲಿ
ಚ್ಚರಮಪರಾಂಬುರಾಶಿಗಿೞಿವಂತಿೞಿದಂ ಕಮಳೈಕ ಬಾಂಧ
॥

ವ॥ ಆಗಳ್ ದುರ್ಯೋಧನನಾತ್ಮೀಯ ಸೇನಾ ನಾಯ
ಗಾಂಗೇಯಂ ಬಿದಿರ ಸಿಡಿಂಬಿನ ಪೊದಱೊಳಗೆ ಮಱಿದೊ
ಮೃಗರಾಜನಂತೆ ಶರಶಯನದೊಳೊಱಗಿದಂ ಕದನತ್ರಿಣೇತ್ರನನೆಂತ
ನೆಂದು ಚಿಂತಿಸಿ ಮಂತ್ರಶಾಲೆಯಂ ಪೊಕ್ಕು ಕರ್ಣ ದ್ರೋಣ
ಕೃತವರ್ಮಾಶ್ವತ್ಥಾಮ ಶಲ್ಯ ಶಕುನಿ ಸೈಂಧವ ಭೂರಿಶ್ರವಃ
ಗಳ್ಗೆಲ್ಲಂ ಬಱಿಯನಟ್ಟಿ ಬರಿಸಿ—

ಶಾ॥ [3]ಆಯ್ತೇ ಸಾಧಿಸಿಕೊಂಡು ಪಾಂಡುಸುತರಂ ನಣ್ಪಿಂಗೆ
ಬೆಸ್ನಿತ್ತು
ಸಯ್ತಾಯ್ತು ಜ್ಜನ ಮಾತು ನಮ್ಮ ಪಡೆಯಂ ಕಾವನ್ನರಿಸ್ನಾ

1 ಟ್ಟಲೊಡ್ಡಿ (ಕ.), ಟ್ಟಿಮೊಂದಿ (ಖ. ಗ. ಘ.) 2 ಕಳ (ಖ
3 ಯ್ತೇ (ಗ.), ಯೇತಾಂ (ಘ.), ಕೈತಾಂ (ಘ§.). 4 ಗಿ (ಘ§.).

[1][ಷ್ಕ್ರೀ]ತಂ ಕಾವೊಡೆ ಕರ್ಣನಕ್ಕುಮದಱಿಂ ನಾಮೆಲ್ಲಮೂತಂಗೆ ನಿ।
ಶ್ಚೈರ್ತತಂ ಬೀರದ ಬೀರವಟ್ಟಮನಿದಂ ನಿರ್ವ್ಯಾಜದಿಂ ಕಟ್ಟುವಂ ॥ ೫೨ ॥

ವ ॥ ಎಂಬುದುಂ ಕರ್ಣನಿಂತೆಂದಂ—

॥ ಸುರಸಿಂಧೂದ್ಭವನಿಂ ಬಳಿಕ್ಕೆ ಪೆಱರಾರ್ ಸೇನಾಧಿಪತ್ಯಕ್ಕೆ [2]ತ।
ಕ್ಕರೆ ಲೋಕೈಕ ಧನುರ್ಧರಂ ಕಳಶಜಂ ತಕ್ಕಂ ನದೀ ನಂದನಂ ॥
ಗೆ ರಣಕ್ಕಾಂ ನೆರಮಾದೆನಪ್ಪೊಡಿನಿತೇಕಾದಪ್ಪುದೀ ಪೊೞ್ತೆ ಪೊ।
ೞ್ತಿರವೇಡೀವುದು ಬೀರವಟ್ಟಮನದಂ ದ್ರೋಣಂಗೆ ನೀಂ ಭೂಪತೀ ॥ ೫೩ ॥

ವ ॥ ಅಂತು ಭೀಷ್ಮಾದನಂತರಂ ದ್ರೋಣಯೆಂಬುದು ಪರಾಶರ
ನನಮೆನೆ ಕರ್ಣನ ನುಡಿಗೊಡಂಬಟ್ಟು—

ಕಂ ॥ ವಿಸಸನ ರಂಗಕ್ಕಾನಿರೆ।
ಬೆಸಗೊಳ್ವುದೆ ಪೆಱರನೆಂದು ಜಯ ಪಟಹಂಗಳ್ ॥
ದೆಸೆ ದೆಸೆಗೆಸೆವಿನೆಗಂ ಕ।
ಟ್ಟಸಿಕೊಂಡಂ ಬೀರವಟ್ಟಮಂ ಕಳಶಭವಂ ॥ ೫೪ ॥

ವ ॥ ಅಂತು ಕುಂಭಸಂಭವನನೇಕ ಶಾತಕುಂಭ ಕುಂಭ ಸಂಭೃತ
ಂಗಳ ಗಂಗಾ ಜಲಂಗಳಿಂ ಪವಿತ್ರೀಕೃತ ಗಾತ್ರನಾಗಿ ಕೌರವ
ಾಗ್ರಗಣ್ಯನಾಗಿರ್ದನಿತ್ತತದ್ವೃತ್ತಾಂತಮನೆಲ್ಲಮನಜಾತಶತ್ರು ಕೇಳ್ದು
ಾರ್ದನನೊಡನೆ ರಿಪುಬಳ ಮರ್ದನೋಪಾಯಮಂ ಸಮಕಟ್ಟುತಿರ್ಪ
ಂ—

1 ಷ್ಕೃಯ್ತಂ(ಕ.), ಷ್ಕೃತಂ (ಖ. ಘ.), ಷ್ಟೇತಂ (ಗ.). 2 ಸಂ । ಗರಕಂ
ಪ (ಕ. ಖ.), ..(ಗ.), ತಕ್ಕರದಾರಿಲ್ಲಿ (ಘ.).

ಮ || ಅದಟಂ ಸಿಂಧುತನೂಭವಂ ವಿಜಯನೊಳ್ ಮಾರ್ಕೊಂಡೊ
ಕಾದ

ಱದೆ ಬೆಂಬಿಟ್ಟೊಡೆ ಕಾದಲೆಂದು ಬೆಸನಂ ಪೂಣ್ದಂ ಗಡಂ
ದ್ರೋಣ

ತದುವಂ ನೋಡುವೆನೆಂದು ಕಣ್ ತಣಿವಿನಂ ನೋಡಲ್ಕೆ ಬ

ದುದಯಾದ್ರೀಂದ್ರಮನೇಱೆ ಭಾನು ಪೊಱಮಟ್ಟೊಡ್ಡಿತ್ತನೀ
ಕಾರ್ಣವಂ ||

ವ || ಆಗಳ್ ಪಾಂಡವ ಬಲದ ಸೇನಾ ನಾಯಕಂ ಧೃಷ್ಟದ
ನೊಡ್ಡಿದ ವಜ್ರವ್ಯೂಹಕ್ಕೆ ಪದ್ಮವ್ಯೂಹಮನೊಡ್ಡಿ ತದ್ವ್ಯೂಹದ ವ
ವಂದು—

ಮಂ || ಕ್ರಾಂ || ಶೋಣಾಶ್ವಂಗಳ್ ರಜತ ರಥಮಂ ಪೂಡೆ ಕುಂಭ

ರ್ಣಾವಾಸಂಬರಮಡರೆ ಮಾ[1][ಱೊ]ಡ್ಡು ದಲ್ ಸಾಲ
ಬಾಣಾವಾಸಕ್ಕೆನುತುಮಳವಂ ಬೀಱುತುಂ ಬಿಲ್ಗೆ ಜಾಣಂ
ದ್ರೋಣಂ ನಿಂದಂ ಮಸಗಿ ತಿರುಪುತ್ತೊಂದು ಕೂರಂಬನಾಗ
||

ಕಂ || ಆ ಸಕಳ ಧರಾಧೀಶರ ।
ಬೀಸುವ ಕುಂಚಮನೆ ಪಾರ್ದು ಬೀಸಲೊಡಂ ಕೆ ||
ಯ್ವೀಸಲೊಡಮಱಿದು ತಾಗಿದು ।
ವಾಸುಕರಂ ಬೆರಸು ತಡೆಯದುಭಯ ಬಲಂಗಳ್ ||

ವ || ಅಂತು ಚಾತುರ್ದಂತಮೊಂದೊಂದಱೊಳ್ ತಾಗಿ
ವಲ್ಲಿ ತಲೆಗಳ್ ಪಱಿಯೆ ಬರಿಗಳ್ ಮುಱಿಯೆ ತೊಡೆಗಳುಡಿಯೆ ಪ
ಸುಲಿಯೆ—

1 ಪೊರ್ಡ್ಡು (ಕ.), ಪೊರ್ಡ್ಡಿ (ಘ.), ಪೊರ್ಡಿ (ಗ. ಘ.).

ಚಂ || ಒಡನೆ ನಭಂಬರಂ ಸಿಡಿಲ್ವ ಪಂದಲೆ ಸೂಸುವ ಕೆಂಡದಿಂಡೆಗಳ್ |
ತೊಡರೆ ತೆರಳ್ದ ನೆತ್ತರ ಕಡಲ್ ನೆಣದೊಳ್ಗೆಸಱೊಳ್ ಜಗಿಲ್ತಗು||
ರ್ವಡರೆ ನಿರಂತರಂ ಪೊಳೆವ ಬಾಳುಡಿ ಸುಯ್ವ ನವ ವ್ರಣಂಗಳೊಳ್ |
ಪೊಡರೆ ಪೊದಳ್ದುದದ್ಭುತ ಭಯಾನಕಮಾಹವ ರಂಗಭೂಮಿಯೊಳ್ || ೫೮ ||

ವ || ಆಗಳೆರಡುಂ ಬಲದ ಸೇನಾನಾಯಕರೊಂದೊರ್ವರೊಳ್
ಂದುವಾಗಳ್ ಕುಂಭಸಂಭವಂ ಧರ್ಮಪುತ್ರನ ಮೊನೆಯೊಳ್ ಭರಂ
ಯ್ದು ಕಾದುವಾಗಳ್—

|| ಧ್ವಜಮಂ ಖಂಡಿಸಿ ಪೂ[1]ಣ್ದು ಬಾಣದೊಳೆ ಧೃಷ್ಟದ್ಯುಮ್ನನಂ ನೆಟ್ಟನೊ |
ಟ್ಟಜೆಯಿಂ ತೂಳ್ದಿ ಶಿಖಂಡಿಯಂ ದ್ರುಪದನಂ ಕಾಯ್ಪಿಂದಮೇಸಾಡಿಮಿ ||
ಕ್ಕು ಜವಂ ಕೊಲ್ವವೊಲಾತನಿಂ ಕಿಱಿಯರಂ ಪ[2]ನ್ನೊರ್ವರಂ ಕೊಂದು ಮ |
ತ್ಸ್ಯಜನಂ ಮಾಣದೆ ಕೊಂದನೊಂದೆ ಶರದಿಂ ನಿಶ್ಶಂಕನಂ ಶಂಕನಂ || ೫೯ ||

ವ || ಆಗಳ್ ಸಾಲ್ವಲ ದೇಶದರಸಂ ಚೇಕಿತ್ಸಂ ಪ್ರಳಯ ಕಾಲದ
ೀಘ ಘಟೆಗಳೆನಿಸುವನೇಕಾನೇಕಪ ಘಟೆಗಳ್ವೆರಸರಸನಂ ಪೆಱಗಿಕ್ಕಿ
ಂದು ತಾಗಿದಾಗಳ್—

ಕಂ || ಓರೊಂದೆ ಪಾರೆಯಂಬಿನೊ |
ಳೋರೊಂದೆ ಗಜೇಂದ್ರಮುರುಳೆ ತೆಗೆ ನೆಱೆದೈಚ್ಚೆ ||
ಚ್ಯೋರಣದೊಳ್ ಚೇಕಿತ್ಸನ |
ನಾರುಮಗುರ್ವಿಸೆ ಘಟೋದ್ಭವಂ ತಱಿದಾರ್ದಂ || ೬೦ ||

1 ಟ್ದು (ಕ.). 2 ನ್ನಿ (ಕ.).

ವ || ಅಂತು ಪಾಂಡವ ಬಲಮೆಲ್ಲಮನಲ್ಲಕಲ್ಲೋಲಂ ಮಾಡಿ ಕಳ
ಕೇತನನಜಾತಶತ್ರುವಂ ಪಿಡಿಯಲೆಯ್ತುವಾಗಳ್—

ಸ್ರ || ಕಾದಲ್ ಸಂಸಪ್ತಕರ್ಕಳ್ ಕರೆದೊಡವರ ಬೆನ್ನಂ ತಗುಳ್ದಾದ
ಕಾಯ್ಪಿಂ
ಕಾದುತ್ತಿರ್ಪಾತನಂತಾ ಕಳಕಳಮನವಂ ಕೇಳ್ದು ಭೋರೆಂದು
ಬಂದೆ
ಚ್ಚಾ ದಿವ್ಯಾಸ್ತ್ರಂಗಳಿಂ ತನ್ಮೊಗವಜರುಗಿಯೆ ತಮ್ಮಣ್ಣನಂ ಶೌಯ
ದಿಂದಂ
ಕಾದಂ ಮುಂ [1]ಬಿಜ್ಜನಂ ಕಾದರಿಗನುಱಿದರಂ ಕಾವುದೇಂ
ಚೋದ್ಯಮಾಯ್ತೇ || ೬೧

ವ || ಆಗಳ್ ಮಾರ್ತಾಂಡಂ ಪ್ರಚಂಡಮಾರ್ತಾಂಡನ ಶರ ನಿಕ
ಸ್ಫುರಿತ ಕಿರಣಂಗಳ್ ಕವಿಯೆ ತನ್ನ ಕಿರಣಂಗಳ್ ಮಸುಳ್ದಪರಜಳನಿ
ಗಿಱಿದನಾಗಳೆರಡುಂ ಪಡೆಗಳಪಹಾರ ತೂರ್ಯಗಳಂ ಬಾಜಿಸಿದಾಗಳ್

ಹರಿಣೀಪ್ಲುತಂ || ಪಡೆಗಳೆರಡುಂ ಬೀಡಿಂಗೆತ್ತಂ ತೆರಳ್ದು ನೆಗೞ್ತಿಯಂ |
ಪಡೆದಱಿದರಂ ಮೆಚ್ಚುತ್ತುತ್ಸಾಹದಿಂ ಪೊಗೞುತ್ತುಮೊ ||
ಳ್ಪಡರೆ ನುಡಿಯುತ್ತಂತಿರ್ದಾದಿತ್ಯನಂದುದಯಾದ್ರಿಯ |
ತ್ತಡರೆ ಪೊಱಮಟ್ಟಾಗಳ್ ಬಂದೊಡ್ಡಿ ನಿಂದುವು ಕೋಪದಿಂ ||
|| ೬೨

ಕಂ || ಅಂತೊಡ್ಡಿ ನಿಂದ ಚಾತು |
ರ್ದಂತಂ ಕೆಯ್ವೀಸುವನ್ನೆಗಂ ಸೈರಿಸದೋ ||
ರಂತೆ ಪೆಣೆದಿಱಿದುವಂತೆ ದಿ |
ಗಂತಾಂತಮನೆಯ್ದೆ ಪರಿಯೆ ನೆತ್ತರ ತೊಱೆಗಳ್ || ೬೩

---

1 ವಜ್ರಿಯಂ ? (ಪ.).

ಅಟ್ಟಿದ ಬಿಲ್ವಡೆ ಮಾಣದೆ ।
ತಟ್ಟಿದ ರಥಮೆಯ್ದೆ [1]ಬಗಿದ ಪುಣ್ಗಳ ಪೊಱಿಯಿಂ ॥
ಮೊಟ್ಟಿದ ಕರಿ ಘಟಿ ಜವನಡು ।
ವಟ್ಟಿಯನನುಕರಿಸೆ ವೀರ ಭಟ ರಣರಂಗಂ || ೬೪ ||

ವ || ಆಗಳ್ ಧೃಷ್ಟಕೇತು ವೃಷಸೇನನೊಳ್ ಸಾತ್ಯಕಿ ಭಗದತ್ತ
ಳ್ ದ್ರುಪದ ಧೃಷ್ಟದ್ಯುಮ್ನರಿರ್ವರುಂ ದ್ರೋಣಾಚಾರ್ಯನೊಳ್ ಪ್ರತಿ
ಧ್ಯಂ ಸೌಬಲನೊಳ್ ಘಟೋತ್ಕಚಂ ಕರ್ಣನೊಳ್ ಪೆಣೆದು ಕಾದೆ—

ಂ || ಪೊಸ ಮಸೆಯಂಬುಗಳ್ ದೆಸೆಗಳಂ ಮಸುಳ್ವನ್ನೆಗಮೆಯ್ದೆ ಪಾಯೆ ಪಾ ।
ಯಿಸುವ ರಥಂಗಳಾ ರಥದ ಕೀಲ್ಮುಱಿದಾಗಳೆ ಕೆಯ್ಯನಲ್ಲಿ ಕೋ ॥
ದೆಸಗುವ ಸೂತರಂಬು ಕೊಳೆ ಸೂತರುರುಳ್ದು ಮಿಳಾತಳಕ್ಕೆ ಪಾ ।
ಯ್ದಸಿಯೊಳೆ ತಾಗಿ ತಳ್ತಿಱಿವ ನಿಚ್ಚಟರೊಪ್ಪಿದರಾಜಿರಂಗದೊಳ್ || ೬೫ ||

ವ || ಆಗಳ್ ಕಳಿಂಗರಾಜನ ಗಜಘಟೆಗಳನಿತುಮೊಂದಾಗಿ ಭೀಮ
ನನ ರಥಮಂ ಪ್ರಳಯ ಕಾಳ ಜಳಧರಂಗಳೆಲ್ಲಮೊಂದಾಗಿ ಕುಲ ಗಿರಿಯಂ
ುತ್ತುವಂತೆ ಸುತ್ತಿ ಮುತ್ತಿದಾಗಳ್—

ಂ || ರಥದಿಂ ಧಾತ್ರಿಗೆ ಪಾಯ್ದು ಕೊಂಡು ಗದೆಯಂ ಕೆಯ್ಸಾರ್ದುದಗ್ರಸ್ಮನ್ಮನೋ ।
ರಥಮಿಂದೆಂದು ಕಡಂಗಿ ಮಾಣದೆ ಸಿಡಿಲ್ ಪೊಯ್ವಂತೆವೋಲ್ ಪೊಯ್ವುದುಂ ॥
ರಥಯೂಥ ಧ್ವಜ ಶಸ್ತ್ರ [2]ಶಂಖ[ಪುಟ]ದೊಳ್ ಘಂಟಾ ಸಮೇತಂ ಮಹಾ ।
ರಥನಿಂದಂ ಕುಳಶೈಳದಂತೆ ಕರಿಗಳ್ ಬೀೞ್ತಂದುವುಗ್ರಾಜಿಯೊಳ್ ॥

1 ಯೊಗೆದ (ಕ.), ಬಗೆದ (ಖ.) 2 ಸಂಘಟನ (ಕ.), ಸಂಕ್ರ ಘಟ (ಖ),
ಂಕ ಘಟ (ಗ.). ಶಂಖ ಘಟ (ಘ.).

ಮದವದ್ದಂತಿಗಳಂ ಕಱುತ್ತ ಸಗಪೊಯ್ಯೊಲ್ಲಯ್ದಾಜಿಯೊಳ್
ಭೀ
ರ್ದೋರ್ದದಿಂದಾಡಿದೊಡತ್ತ ಚಾಂಡ ತಟನುಂ [1][ತಾ]ಪನ್ನೆ ಗ
ಪಾ
ಱಿದ ಪೇರಾನೆಯೊಡಲ್ಗಳಭ್ರ[2]ತಳದೊಳ್ ಸಿಲ್ಕಿರ್ದುವ್ರೋ
ಇವೆ ಬೀೞ್ತಿರ್ದುವು ಬೆಟ್ಟು ಬೀೞ್ವ ತೆಱದಿಂದಿನ್ನುಂ ಕುರ
ಕ್ಷೇತ್ರದೊಳ್

ಕಂ ॥ ತೊಡರಿ ತಡಂಗಾಲ್ ಪೊಯ್ದೊಡೆ ।
ಕೆಡೆದುಂ ತಿವಿದೊಡೆ ಸುರುಳ್ದು ಮೋದಿದೊಡಿರದೆ
ಲ್ವಡಗಾಗಿ ಮಡಿದು ಬಿಟ್ಟುವು ।
ಗಡಣದೆ ಕರಿಘಟೆಗಳೇಂ ಬಲಸ್ಥನೊ ಭೀಮಂ

ವ॥ ಅಂತಲ್ಲಿ ಪದಿನಾಲ್ಸಾಸಿರ ಮದದಾನೆಯುಮಂ
ನಾಯಕಂ ಭಾನುದತ್ತಂ ಮೊದಲಾಗೆ ನೂರ್ವರರಸುಮ
ಕೊಂದೊಡೆ ಕೌರವ ಬಲಮೆಲ್ಲಮೊಲ್ಲನುಲಿದೋಡಿ ಭಗದತ್ತ
ಮಱೆಯಂ[3] ಪೊಕ್ಕಾಗಳ್—

ಮ॥ ಸ್ರ॥ ನೆಗೞ್ದಿಂ ದೇವೇಂದ್ರನೈರಾವತದ ಕೆಳೆಯನೆನ್ನೇೞ
ಯು
ದಿಗಿಭಂ ದುರ್ಯೋಧನಂ ನಚ್ಚಿದನೆನಗಿದಿರಂ ಭೀಮನೆೞ್ತ
ಮುಗಿಲಂ ಮುಟ್ಟಿತ್ತು ಸಂಪೆನ್ನಳವುಮದಟುಮೆಂದಾರ್ದು
ದೋರ್ದರ್ಪಯ
ಭಗದತ್ತಂ ಸುಪ್ರತೀಕ ದ್ವಿಪಮನುಪಚಿತೋತ್ಸಾಹದಿಂ ತ
ಕೊಟ್ಟಂ

1 ಕಾಣ್ಬ (ಕ.), ಕಾಪ (ಖ.ಗ.ಘ.). 2 ಪಥ (ಗ. ಘ.). 3 ತ್ರಿಕಳ

ಕಂ|| ಮದ ಕರಿಯ ಪರಿವ ಭರದಿಂ।
ದದಿರ್ದೊಡೆ ನೆಲನೊಡ್ಡಿ ನಿಂದ ಚತುರಂಗಮುಮೊ ||
ರ್ದೊದಲೆ ನಡುಗಿದುದು ಕೂಡಿದ।
ಚದುರಂಗದ ಮಣೆ[1]ಯನಲ್ಗಿದಂತಪ್ಪಿನೆಗಂ || ೭೦ ||

ವ|| ಆಗಳಸುರನುಯ್ದ ನೆಲನನಾದಿ ವರಾಹನಜಿಸಲೆಂದು ಸಕಳ ಚರಕಳಿತ ಜಲನಿಧಿಗಳಂ ಕಲಂಕುವಂತೆ ಪಾಂಡವ ಬಳ ಜಳನಿಧಿಯ ಕುಳ ಝೋಂಕಾರ ಮುಖರಿತ್ತ ವಿಶಾಳ ಕರಟ ತಟವಾ ದಿಶಾ ೦ದ್ರಂ ಕಲಂಕೆ—

|| ತಳದರ್ದುದು ಕರ್ಣತಾಳ ಪವನಾಹತಿಯಿಂ ಜಳರಾಶಿ ಕೆಯ್ಯ ಬ।
ಳ್ವಳಿಕೆಗೆ ದಿಗ್ಗಜಂ ದೆಸೆಯಿನತ್ತ ತೆರಳ್ದುವು ಕಾಯ್ಪಿನಿಂ ದಿಶಾ ||
ವಳಿವೆರಸಂಬರಂ ಪೊಗೆದು ಪೊತ್ತಿದುದಾದ ಮದಾಂಬುವಿಂ ಜಗಂ।
ಜಳಧಿವೊಲಾಯ್ತುದಂ ನೆಱಿಯೆ ಬಣ್ಣಿಪರಾರ್ ಗಳ
ಸುಪ್ರತೀಕಮಂ|| ೭೧||

|| [2]ಕರ ನಖ ದಂತ ಘಾತದಿನುರುಳ್ವ ಚತುರ್ಬಲದಿಂ ತೆರಳ್ವ ನೆ।
ತ್ತರ ಕಡಲಾ ಕಡಲ್ವರೆಗಮೆಯ್ದೆ ಮಹಾ ಮಕರಂ ಸಮುದ್ರದೊಳ್||
ಪರಿವವೊಲಿಂತಗುರ್ವುವೆರಸಾ ಭಗದತ್ತನ ಕಾಲೊಳಂತದೇಂ।
ಪರಿದುದೊ ಸುಪ್ರತೀಕ ಗಜಮಚ್ಚರಿಯಪ್ಪಿನವಾಜಿ ರಂಗದೊಳ್
|| ೭೨ ||

ವ|| ಅಂತು ಪರಿದ ಬೀದಿಗಳೊಳೆಲ್ಲಂ ನೆತ್ತರ ತೊಱೆಗಳ್ ಪರಿಯೆ ಡದ ತೊಱೆ[ಯಂತೆ] ಪರಿದ ಸುಪ್ರತೀಕ[3][ಂ]ಕೆಯ್ಯ ಕಾಲ ಕೋಡೇ ೊಳ್ ಬಲಮುನೆಲ್ಲಂ ಜವ[4]ನೆ ಜಿವುಳಿ[5]ದುಱುವಂತೆ ತೊಟ್ಟುಱಿದು ಸು ಪದಿನಾಲ್ಸಾಸಿರ ಮದಾಂಧ ಗಂಧ ಸಿಂಧುರಂಗಳುಮನೊಂದು ಲಕ್ಕ

1 ಯೆನಲ್ಕಿ (ಕ.), ಯುನಲ್ಲಿ (ಖ.). 2 ಖ (ಕ.). 3 ದ (ಸ.). 4 ನ ಖ.). 5 ತು (ಕ.).

ರಥಮುಮನರೆದು [1]ಸಣ್ಣಿಸಿದಂತೆ ಮಾಡಿದಾಗಳ್ ಗಜಾಸುರನೊ
ರಂಬೆರಸು ತಾಗುವಂಧಕಾರಾತಿಯಂತೆ ಭೀಮಸೇನಂ ಬಂದು ಪ್ರೊಣ

ಚಂ|| ತೊಲಗಿದು ಸುಪ್ರತೀಕ ಗಜಮಾಂ ಭಗದತ್ತನೆನಿಲ್ಲಿ ನಿನ್ನ ತ
ಳ್ವಲದ ಪೊಡರ್ಪು ಸಲ್ಲದೆಲೆ ಸಾಯದೆ ಪೋಗೆನೆ ಕೇಳ್ದು ಭೀಮನ
ತೊಲೆಯದಿರುರ್ಕಿನೊಳ್ ನುಡಿವೆಯೀ ಕರಿ ಸೂಕರಿಯಲ್ತೆ
ಟಲನೊಡೆಯೊತ್ತಿ ಕೊಂದಪೆನಿದಲ್ತಿದಱಿಮ್ಮನುಮೆನ್ನನಾಂಪು
||

ವ|| ಎಂದು ನಾರಾಚಂಗಳಿಂ ತೋಡುಂ ಬೀಡುಂ ಕಾಣ
ದಂತು ಸುಪ್ರತೀಕ ಕರಿಯೆಂಬ ಗಿರಿಯ ಮೇಲೆ ಭೀಮನೆಂಬ ಕಾಲಮ
ಸರಲ ಸರಿಯಂ ಸುರಿಯೆ—

ಚಂ|| ಸಿಡಿಲೆಱಪಂದದಿಂದೆಱಗಿ ದಿಕ್ಕರಿ ತನ್ನ ವರೂಥಮುಂ ಪಡ
ಲ್ವಡಿಸೆ ಮರುತ್ಸುತಂ ಮುಳಿದು ಮಚ್ಚರದಿಂ ಗಜೆಗೊಂಡು
ಸುತ್ತುಗ
ಡಡಿಗಿಡೆ ನು[2][ರ್ಗಿ] ಪೊಯ್ದು ಪೆಱಪಿಂಗುವುದುಂ ಕರಿ ನೊಂದ
ಕೋಪ
ಪಿಡಿದೆಱಗಿತ್ತು ಭೀಮನನಗುರ್ವಿಸಿ ಪಾಂಡವ ಸೈನ್ಯಮಳ್ಕುಱ
||

ವ|| ಅಂತೆಱಗಿದೊಡೆ ಕೋಡ ಕೆಯ್ಯ ಕಾಲೆಡೆಗಳೊಳ್ [3]ಬಿಣ್ಪ
[ಪೆಣೆ] ವಂದದಿಂ[4]ದೇರ್ದು ಡೊಕ್ಕರಂಗೊಂಡು ಕುರುಕ್ಷೇತ್ರದಿ
ಪನ್ನೆರಡು ಯೋಜನಂಬರಮೊತ್ತುವುದುಂ—

---

1 ಸಂದಣಿ (ಕ.ಖ.) 2 ಗ್ರ್ಗ (ಕ.). ಗ್ಗ (ಖ. ಗ. ಘ.). 3 ಬಣ್ಪ
ಪೊಳೆ (ಕ. ಖ.). . . , (ಗ.) ಬಿಣ್ಪುಮಂ ಪೊಳೆ (ಘ.). 4 ಬೆಟ್ಟಿದ

ಕಂ|| ಕರಿ[1][ಯು]ಂ ಕುರು ಭೂಮಿಯ ನಡು ।
ವರೆಗಂ ಪವನಜ [2]ನನೊತ್ತೆ ತೋಳ್ವಲಮಾಗಳ್ ||
ಸರಿ ಸರಿಯಾದುದು ತದ್ದಿ ।
ಕ್ಕರಿಗಂ ಭೀಮಂಗಮುಗ್ರ ಸಂಗರ ಧರೆಯೊಳ್ || ೭೫ ||

ವ|| ಅನ್ನೆಗಮಿತ್ತ ಸಂಸಪ್ತಕ ಬಲಮೆಲ್ಲಮನಳಱಿ[3] ಪೆಳಱಿ[3] [3]ಕಿವು
ೞಿದು ಕೊಲ್ವ ವಿಕ್ರಾಂತತುಂ[4]ಗಂ ಚಕ್ರಿಯನಿಂತೆಂದಂ—

ಪಿರಿದುದು ಸುಪ್ರತೀಕ ಗಜಮೇಱಿದವಂ ಭಗದತ್ತನಾ[5]ಮ[5]ದ ।
ದ್ವಿರದಮನಾಂಕೆಗೊಂಡು ಪೆಣೆವಂ ಪವನಾತ್ಮಜನೀಗಳಾಹವಂ ||
ಪಿರಿದುದಲತ್ತ ಪೋಪಮೆನೆ ತದ್ರಥಮಂ ಹರಿ ವಾಯು ವೇಗದಿಂ ।
ಪರಿಯಿಸೆ ತಾಗಿದಂ ಹರಿಗನಂಕದ ಪೊಂಕದ ಸುಪ್ರತೀಕಮಂ,
|| ೭೬ ||

ವ|| ಅಂತು ತಾಗಿ ಮೃಗರಾಜ ನಖರ ಮಾರ್ಗಣಂಗಳೊಳಂ
ರ್ಗ ನಖಾಸ್ತ್ರಂಗಳೊಳಮಾನೆಯುಮಂ ಭಗದತ್ತನುಮಂ ಪೂೞ್ದಿಡೆ
ತ್ತಂ ಮುಳಿದು [6]ಭೂದತ್ತಮಪ್ಪ ದಿವ್ಯಾಂಕುಶಮಂ ಕೊಂಡು—

ಕಂ || ಇಡುವುದುಮದು ವಿಲಯಾಗ್ನಿಯ ।
ಕಿಡಿಗಳನುಗುೞುತ್ತುಮೆಯ್ದೆ ವರ್ಪುದುಮಿದಿರಂ ||
ನಡೆದಜರನುರ[7][ದಿ] ನ್ನಾಂತೊಡೆ ।
ತುಡುಗೆವೊಲೆಸೆದಿರ್ದುದಂಕುಶಂ ಕಂಧರದೊಳ್ || ೭೭ ||

ವ||ಆಗಳ್ ವಿಕ್ರಾಂತತುಂಗಂ ಚೋದ್ಯಂಬಟ್ಟದೇನೆಂದು ಬೆಸಗೊಳೆ-

ಇದು ಪೆಱತಲ್ತು ಭೂತಲಮನಾಂ ತರಲಾದಿ ವರಾಹನಾದೆನಂ ।
ದದಱ ವಿಷಾಣಮಂ ಬೞಿಯಮಾ ವಸುಧಾಂಗನಿಗಿತ್ತೆನೀತನಾ || ದಂತ

1 ಯುಂ (ಪ.). 2 ನುಮೊ (ಕ.). 3 ಜಿವುೞಿ ? (ಪ.). 4 ಗನಂ
ಂತೆಂದಂ (ಖ. ಗ. ಘ .). 5 ರು (ಕ.), ರ (ಖ.). 6 ಭಗವದ್ದತ್ತ (ಕ.).
ತ್ತ (ಖ.), ಭಗದತ್ತ (ಗ.), ಭಗವದತ್ತ (ಘ.). 7 ಮ (ಪ.).

ಸುವತಿಯ [1]ಪೌತ್ರನಾಕೆ ಕುಡೆ ಬಂದುದಿವಂಗೆನಗಲ್ಲದಾನ
ಗಮುದಱನಾಂತೆನಿಂ ತಱವುದೀ ಕರಿ ಕಂಧರಮಂ ಗುಣಾ

ಉ ॥ ಎಂಬುದುಮೊಂದೆ ದಿವ್ಯಶರದಿಂ ಶಿರಮಂ ಪಱಯೆಚ್ಚೊಡ
ತ್ತಂಬದಿನಾಂತೊಡಾಂ ಬಱದೆ ತಪ್ಪಿದೆನೆಂದು ಕಿರೀಟಿ ತ
ಲ್ಲಂ ಬಿಸುಟಿರ್ಪೊಡಚ್ಯುತನಿದೇ[2][ತರಿನಾಕುಲಮಿರ್ದೆ] ನೊ
ತೆಂಬುದುಮೆಚ್ಚನಂತೆರಡು ಕೆಯ್ಗಳುಮಂ ಮುಳಿಸಿಂ
ಗುಣಾರ್ಣವಂ

ಕಂ ॥ ಎಚ್ಚವನ ತಲೆಯುಮಂ ಪಱ ।
ಯೆಚ್ಚೊಡೆ ದಿಕ್ಕರಿಯ ತಲೆಯುಮಾತನ ತಲೆಯು
ಪಚ್ಚಿಕ್ಕಿದಂತೆ ಕೆಯ್ಗಳು ।
ಮಚ್ಚರಿಯಪ್ಪಿನೆಗಮೊಡನುರುಳ್ದುವು ಧರೆಯೊಳ್

ಉ ॥ ಇತ್ತರಿಗಂಗಮಿತ್ರ ಜಯಮಪ್ಪುದುಮತ್ತಮರರ್ಕಳಾರ್ದು
ಸುತ್ತಿರೆ ಪುಷ್ಪವೃಷ್ಟಿಗಳನೋಗರವ್ರಾಗಳ ಬಂಡನೆಯ್ದೆ ಪೀ
ರುತ್ತೊಡವಂದುವಿಂದ್ರ ವನದಿಂ ಮಱದುಂಬಿಗಳಿಂದ್ರ ನಿ
ಮುತ್ತುಮನೋಳಿಯೋಳಿಯೊಳೆ ಕೋದೆ[3]ಟಲಿಕ್ಕಿದ ಮಾ
ವೋಲ್

ಕಂ ॥ ಧರಣೀ ಸುತನಟಿದಂ ದಿ ।
ಕ್ಕರಿ ಕೆಡೆದುದು ನರ ಶರಂಗಳಿಂ ಭುವನಮುಮಿ ॥
ನ್ನುರಿಯದಿರದಾನಡಂಗುವೆ ।
ನಿರದೆಂಬವೊಲರ್ಕನಪರ ಜಳನಿಧಿಗಿಱದಂ

ವ ॥ ಆಗಳೆರಡುಂ ಪಡೆಗಳಪಹಾರ ತೂರ್ಯಂಗಳಂ
ತಂತಮ್ಮ ಬೀಡುಗಳ್ಗೆ ಪೋಪುದುಂ ಸುಯೋಧನಂ ಭ

1 ಪು (ಕ. ಖ. ಗ. ಘ.). 2 ಕವನಂಕುಶ ವಿದ್ಯೆ (ಕ.
ನವನಂಕುಶ . . (ಗ.). 3 ಳಿದಿ (ಘ.).

ಂಗೆಟ್ಟುದ್ದತೊಟ್ಟ ಸನ್ನಣಮನಪ್ಪೊಡಂ ಕಳೆಯದೆಯುಮರವನೆಗೆ
ದೆ ಕುಂಭಸಂಭವನಲ್ಲಿಗೆವಂದು—

ಮಸಕಂಗುಂದದ ಸುಪ್ರತೀಕ ಗಜಮಂ ಧಾತ್ರೀಸುತಂ ಕೀೞೆ
ಚೋ।
ದಿಸಿ ಭೀಮಂ ಗೆಲೆ ಮುಟ್ಟೆವಂದು ಹರಿಯುಂ ತಾನುಂ ಭರಂ
ಗೆಯ್ದು ತ ॥
ನ್ನೆ ಸ[1]ಕಂ[ಗಾ]ಯುದಧರ್ಮಯುದ್ಧದೆ ನರಂ ಕೊಲ್ವಲ್ಲಿ ಕಂಡಿಂತು
ಪೇ।
ಕ್ಷಿಸಿ ನೀಮುಂ ನಡೆ ನೋಡುತಿರ್ದಿರೆನೆ ಮತ್ತಿನ್ನಾರನಾಂ ನಂಬು
ವೆಂ ॥ ೮೩ ॥

ವ ॥ ಎಂದು ನುಡಿದ ಪನ್ನಗಧ್ವಜನ ನುಡಿಗೆ ಕಾರ್ಮುಕಾಚಾರ್ಯ
ಂದಂ—

ಎನಗಲ್ತಾರ್ಗಮಸಾಧ್ಯನಲ್ತೆ ವಿಜಯಂ ನೀನಾತನಂ ಗೆಲ್ವ ಮಾ।
ತನವೋಘಂ ಬಿಸುಡಿಂದೆ ನಾಳೆ ವಿಜಯಂ ಮಾರ್ಕೊಳ್ಳದಂದುರ್ಕಿ
ಪೊ ॥
ಕ್ಕನನಾಂತೊರ್ವನನಿಕ್ಕುವೆಂ ಕದನದೊಳ್ ಮೇಣ್ ಕಟ್ಟುವೆಂ
ಧರ್ಮ ನಂ।
ದನನಂ ನೀನಿದನಿಂತು ನಂಬು ಬಗೆಯಲ್ವೇ[2]ಡನ್ನನಂ ಭೂಪತೀ
॥ ೮೪ ॥

ವ ॥ ಎಂಬುದುಮಾನಿನಿತಂ ನಿ[3]ಮ್ಮ ಪೂಣಿಸಲೆ ಬಂದೆನೆಂದು
ಮುಟ್ಟು ಬೀೞ್ಕೊಂಡು ಪೋಗಿ ಸಂಸಪ್ತಕರ್ಕಳ್ಗೆ ಬೞಿಯನಟ್ಟಿ
—

1 ಕಂ ಕಾಯದ (ಕ.), ಮಂ ಕಾಯದೆ (ಖ. ಘ.), . . .(ಗ.). 2 ಡೆನ್ನನಿಂ
.), ಡೆನ್ನಂ (ಘ.). 3 ಮ್ಮಂ (ಕ.).

ಚಂ || ಅರಿಗನನಾಂಪ ಗಂಡುಮುದಟುಂ ನಿಮಗಾವಗಮಾದುದಾಹ
ಜಿರದೊಳದರ್ಕೆ ನಾಳೆ ನರನಂ ತೆಗೆದುಯ್ವುದು ಧರ್ಮಪುತ್ರನ
ಗುರು ಪಿಡಿದಪ್ಪನೆಂದವರನಾಗಳೆ ಪೂಣಿಸಿ ಪೋಗವೇಟ್ಟು ಮ
ಚ್ಚರದೊಳೆ ಮಾಣದೊಡ್ಡಿದನಸುಂಗೊಳೆ [1]ಕಕ್ಕರ ಸಂಜೆ ಸಂಜೆ
ಯೊಳ್||

ವ || ಆಗಳ್ ಪಾಂಡವ ಪತಾಕಿನಿಯುಮಿರದೆ ಪೊಱಮಟ್ಟ
ಚಂದ್ರವ್ಯೂಹಮನೊಡ್ಡಿ ನಿಲೆ ಸಂಸಪ್ತಕರ್ ತಮಗೆ ಮಿಱ್ಱುಗರೆ
ವಿಕ್ರಮಾರ್ಜುನನ್ನಂ ಕರ್ಚಿಯುಯ್ದರಿತ್ತ—

ಅನವದ್ಯ || ಅಱಿಪಿದಂ ಗುರು ಭಾರ್ಗವನಿಂತೀಯೊಡ್ಡನಿದಂ ಗೆಲಲ್
ನ
ನೆಱೆಯನುರ್ಕಿನಳುರ್ಕೆಯಿನೊರ್ವಂ ಪೊಕ್ಕೊಡೆ ಪೊ[2]ಕ್ಕನೆ
ಣ
ಪೊಱಮ[3]ಡಂ ತಱಿದೊಟ್ಟುವೆನಂತಾ ಪಾಂಡವ ಸೈನ್ಯಮನೆಂ

ಲ್ಲೆಱೆಯನೊಡ್ಡಿದನಂಕದ ಚಕ್ರವ್ಯೂಹಮನಾಹವ ರಂಗದೊ
||

ವ || ಅಂತೊಡ್ಡಿದ ಚಕ್ರವ್ಯೂಹದ ನಡುವೆಡೆಯಱಿದು ಕ
ರಾಜನ ಕರಿಘಟೆಗಳುಮಂ ಕರ್ಣ ಶಲ್ಯ ಶಕುನಿ ಕೃಪ ಕೃತವ
ಭೂರಿಶ್ರವೋಶ್ವತ್ಥಾಮ ದುರ್ಯೋಧನ ವೃಷಸೇನ ಲ[4]ಕ್ಮಣಾದಿಗಳ
ರಥ ಮಹಾರಥ ಸಮರಥಾರ್ಧ ರಥರ್ಕಳನಿರಿಸಿ ಮತ್ತಮವರ ಬಳಸಿ
ಮನೇಕ ಸಾಮ್ರಜ ಬಲಂಬೆರಸು ಜಯತ್ಸೇನ ಸುದಕ್ಷಿಣ ಕಾಂಭೋಜ
ನಾಯಕರನಿರಿಸಿ ಮತ್ತಮವರ ಕೆಲದೊಳೆಡೆಯಱಿದು ಬಕಾಸುರ ಜ
ಸುರರ ಮಕ್ಕಳಪ್ಪಳಂಭೂಷಣ ಹಳಾಯುಧ ಮುಸಳಾಯುಧ ಕಾಳ
ರೂಕ್ಷ ರಾಕ್ಷಸಬಲಮನಿರಿಸಿ ಮತ್ತಮವರ ಕೆಲದೊಳಿವರ್ಗಿವರ್ ಪಾ

1 ತ (ಘ§). 2 ಕ್ಕನ (ಕ. ಖ.), ಕ್ಕೆನೆ (ಗ.). 3 ಡಲಿಯ (ಖ. ಗ.
4 ಕ್ಷ್ಮ (ಕ.)

ಯಾಗಿರ್ಪುದೆಂದು ನಿಂದ ನೆಲೆಯೊಳ್ ತಳರದೆ ನಿಲ್ವಂತಾಗಿರಿಸಿ ಗುಹೆಯ ಬಾಗಿಲೊಳ್ ಸಿಂಹಮಿರ್ಪಂದದಿಂ ಭಾರದ್ವಾಜಂ ಸಿಂಧುರಾಜಂಬೆರಸು ಚಕ್ರವ್ಯೂಹದ ಬಾಗಿಲೊಳ್ ನೆಱೆದು ಮೆಱೆದು ನಿಂದಾಗಳ್ ಧರ್ಮ ಪುತ್ರನೇಗೆಯ್ವ ತೆಱನುಮನಱಿಯದಭಿಮನ್ಯುವಂ ಕರೆದಿಂತೆಂದಂ—

ಮ || ಸ್ರ || ಇದು ಚಕ್ರವ್ಯೂಹಮೀ ವ್ಯೂಹಮನೊಡೆವದಟಂ ಪಾರ್ಥನಂ ತಾತನುಂಗೆಂ |
ಟೆದನೆಮ್ಮೀ ನಾಲ್ವರುಂ ಭೇದಿಸಲಱಿಯೆವಿದಂ ಕಂದ ನೀಂ ಬಲ್ಲಪೇ[1]ೞೆಂ ||
ಬುದುಮಾನೆಮ್ಮಯ್ಯನೊಳ್[2] ಕೇಳ್ದಱಿವೆನಿದನಿದೇನಯ್ಯ ಚಿಂತಾಂತರಂಪೊ ||
ಕ್ಕಿದನೀಗಳ್ ವನ್ಯ ಗಂಧದ್ವಿರದಮೆ ಕೊಳನಂ ಪೊಕ್ಕವೋಲ್ ಕಾದಿ ತೋರ್ಪೆಂ || ೮೭ ||

ಕಂ || ಅನಲನ ಕೊಟ್ಟ ಗಾಂಡಿವದ ತೇರ ಮುರಾರಿಯ ಮೆ[3]ಚ್ಚ ದೇವದೇ |
ವನ ದಯೆಗೆಯ್ದ ಸಾಯಕದ ಬೆಂಬಲದೊಳ್ ಕಲಿಯೆಂದು ಕೆಮ್ಮನ ||
ಮ್ಮನನ[4]ದಟಟ್ಟುತಿರ್ಪಿರವಿದೇಂ ಪಗೆಯೊಡ್ಡು ಗೆಲಲ್ಕಳುಂಬಮೆಂ |
ಬನಿತುವರಂ ಮನಕ್ಕೆ ನಿಮಗತ್ತಳಗಂ ಬರೆ ಮತ್ತೆ ಮಾಣ್ಬೆನೇ || ೮೮ ||

ನೆಱೆದು ಚತುರ್ವಲಂಬೆರಸು ಬಂದುಱಿದೊಡ್ಡಿದ ಗಂಡರಾರುಮೆ |
ನ್ನಱಿಯದ ಗಂಡರೇ ನೆಗೆದ ನೆತ್ತರ ಸುಟ್ಟುರೆ ಕಂಡದಿಂಡೆಗಳ್ ||

1 ಲ್ಲೆ (ಕ. ಖ.). 2 ನೊಳ್ (ಕ.). 3 ಚ್ಚಿ (ಖ. ಗ. ಘ.). 4. . . . .
ಪ್ಪಿದದಟಂ (ಕ. ಖ.). . . . ಣ್ಣಿದದಟಂ (ಗ.), ಳಿಪಿಂದದಃಟ್ಟ (ಘ.).

ಪಱಿದು ನಭಂಬರಂ ಪರೆದು ಪರ್ವಿ ಲಯಾಗ್ನಿ ಶಿಖಾಕಳಾ
ಮಱೆಯಿಸೆ ತಾಗಿ ತತ್ತಱಿಯಪನ್ನೆಗಮೆಂತು ನರಂಗೆ [1]ಪ್ರ
||

ವ || ಎಂಬುದುಂ ಯಮನಂದನನಿಂತೆಂದಂ—

ಚಂ || ಅನುವರದಲ್ಲಿ ತಳ್ತು ಪಗೆಯಂ ತವೆ ಕೊಂದೊಡಮಾಂತರಾ
ಧನಮೊಳಗಱ್ಗಿ ತಱ್ಗಿದೊಡಮೆನ್ನಯ ಸಂತತಿಗಾಗಿಸಿರ್ದ
ನ್ನನೆ ಮದ ದಂತಿ ದಂತ ಮುಸಲಾಹತಿಗಂ ಕರವಾಳ
ಬಾಯ್ದ
ಬಿಸ ಮೊನೆಗಂ ಮಹಾರಥರ ತಿಂತಿಣಿಗಂ ಪಿಡಿದೆಂತು ನೂ
||

ಕಂ || ಮಗನೆ ಪದಿನಾಲ್ಕು ವರುಷದ |
ಮಗನ್ನೆ ನಿನ್ನನ್ನನೊರ್ವನಂ ಪಗೆವಡೆಯೊ ||
ಡ್ಡುಗಳನೊಡೆಯಲ್ಕೆ ಪೇೞ್ದಿರ್ದೆ |
ಧಗಮೆನೆ ಸೈರಿಸುವುಪಾಯಮಾವುದು ಕಱುವೇ ||

ವ || ಎಂದೊಡಾ ಮಾತಂ ಮಾರ್ಕೊಂಡಭಿಮನ್ಯುವಿಂತೆಂ

ಮ || ಕ್ರಮಮಂ ಕೆಯ್ಕೊಳಲೆಂದು ಪುಟ್ಟಿ ರಣದೊಳ್ ಸಾವನ್ನೆಗಂ
ಮಾಣ
ಕ್ರಮಮುಕ್ಕುಂ ಕ್ರಮಮುಕ್ಕುಮೇ ಕ್ರಮಮನಾನೇಗೆಯ್ದಪೆ
ವಿಕ್ರ[2]ವ
ಕ್ರಮಮಾಂ ವಿಕ್ರಮದಾತ[3]ನೆಂ ಕ್ರಮದ ಮಾತಂತಿರ್ಕೆ ಮ
ದೊ
ಕ್ರಮಕೆಂದಿರ್ದೆನೆ ಬಿಟ್ಟೊಡಂ ಬಿಡಮೊಡಂ ಬೀೞ್ಕೊಂಡೆನಿ
ಮಾಣ್ಪೆನೇ ||

1 ಪು (ಕ.). 2 ಮ (ಕ. ಖ. ಗ.). ಮಃ (ಘ.). 3 ನೇಂ (ಕ.).

ವ || ಎಂದು ತನ್ನೇಱಿದ ಕನಕ ರಥಮಂ ತನ್ನ ಮನದನ್ನನಪ್ಪ
ಜಯನೆಂಬ ಸಾರಥಿಯಂ ಚೋದಿಸೆಂದಾಗಳ್—

ಕಂ || ಎಱಗುವ ಬಟ್ಟೆನಂಬುಗಳ ಬಲ್ಸರಿ ಕುಂಭಜನಂ ಮರ[1]ಳ್ಚೆ ಪಾ |
[2]ಯ್ದುಱಿಕೆಯ ಪಾರೆಯಂಬುಗಳ ತಂದಲ್ಗುರ್ವಿಸಿ ಸಿಂಧು ರಾಜನಂ ||
ಮಱುಗಿಸೆ ಬಾಗಿಲೊಳ್ ಮುಸುಱಿ ನಿಂದ ಘಟಾವಳಿಯಂ ತೆರಳ್ಚಿ ತ |
ತ್ತಱದಱಿದೊತ್ತಿ ಪೊಕ್ಕನಭಿಮನ್ಯು ವಿರೋಧಿ ಬಳಾಂಬು ರಾಶಿಯಂ || ೯೩ ||

ವ || ಅಂತು ಪೊಕ್ಕು ವಿರೋಧಿ ಸೈನ್ಯಮಂ ಮಾರಿ ಪೊಕ್ಕಂತೆ
ಣಮಯಂ ಮಾಡಿ ತೂ[3]ಱಿಕೊಂಡ ಜೋಳದಂತಿರೆ ಪಡಲ್ವಡಿಸಿ
ದಾಗಳ್—

ಕಂ || ಒಣಗಿದುದೊಂದು ಪೆರ್ವಿದಿರ ಪೆರ್ವೊದ[4]ಱಿಂ ಮೊರೆದುರ್ವ ವಾಶುಶು |
ಕ್ಷಣಿಯವೊಲಾಂತ ಖಟ್ಗಿ ನಿವಹಕ್ಕೆ ರಥಕ್ಕೆ ದಟಿಕ್ಕೆ ಮತ್ತ ವಾ ||
ರಣ ನಿವಹಕ್ಕೆ ತಕ್ಕಿನಭಿಮನ್ಯುವ ಕೂರ್ಗಣೆ ಪಾಯ್ದು ನುಂಗಲುಂ |
[5]ಬೊಣೆಯಲುಮುರ್ಚಿ ಮುಕ್ಕಲುಮಿದೇಂ ನೆಱೆ ಕಲ್ತುವೊ ಯುದ್ಧರಂಗದೊಳ್ || ೯೪ ||

ವ || ಅಂತಿದಿರಾಂತ ಮಾರ್ಪಡೆಯೆಲ್ಲಮಂ ಜವನ ಪಡೆಗೆ ಪಡಿ[6]
ಸಚ್ಚಿಕ್ಕುವಂತಿಕ್ಕಿ ನಿಂದ ನರ ನಂದನನಂ ಕಂಡು ವಿಕ್ರಮಕ್ಕಂ ಕ್ರಮಕ್ಕಂ
ಪುರುಡಿಸುವ ಸುಯೋಧನನ ಮಕ್ಕಳ್ ಲಕ್ಕಣಂ ಮೊದಲಾಗೆ ನೂರ್ವರು
ರೊಂದಾಗೆ ಬಂದು ತಾಗಿದಾಗಳ್—

---

1 ಳ್ಚೆ (ಕ.). 2 ಯ್ವ (ಕ.). 3 ಱಿ (ಖ.ಘ.). 4 ಱಿಂ ಮೊರೆವಾ ಮಹಾ
(ಕ.ಖ.) ಱಿಂ ಮೊರೆವಾ . . . (ಗ.) 5 ಕಣೆ (ಗ.) ನೊಣೆ (ಘ.). 6 ಗೊ (ಗ.ಘ.).

8

ಸ್ರ || ಸೂೞ್ಪಿಸೆಚ್ಚೆಚ್ಚು ಬಿಲ್ಲಂ ರಥದ ಕುದುರೆಯಂ ಸೂತನಂ
ಖಂಡಿಸ
ಱೇೞಿಂಟೊಂಬತ್ತು ಪತ್ತೆಂಬಱಿಕೆಯ ಸರಲಿಂದೊಱಿಕೊ
ಮೆಯ
ಪಾೞಿಂಬಂತಾಗೆ ಪಾರ್ದಾರ್ದುಱಿದಿಸೆ ಮುಳಿಸಿಂ ನೂ
ಪೊನ್ನತಾ
ಸೂೞೊಳ್ ಬೀೞ್ವಂತೆ ಬಿೞ್ದರ್ ಮಕುಟ ಮಣಿ ಗಣ
ಸಾರರ್ ಕುಮಾರರ್ ||

ವ|| ಆಗಳ್ ಸುಯೋಧನನ ಮಕ್ಕಳ ಸಾವಂ ಕಂಡು ತ
ಮೊಗಮನಾವ ಮೊಗದೊಳ್ ನೋೞ್ಪೆನೆಂದು ದುಶ್ಶಾಸನಂ
ತಾಗಿದಾಗಳ್—

ಕಂ || ಒಂದೆ ಸರಲಿಂದಮುವನೆರ್ದೆ |
ಯಂ ದೊಕ್ಕನೆ ತಿಣ್ಣಮೆಚ್ಚು ಕೊಲಲೊಲ್ಲ[2]ನೆ ಸಂ
ಕ್ರಂದನ ನಂದನ ತನಯಂ |
ತಂದೆಯ ಪೂಣ್ಕೆಯನೆ ನೆನೆದು ದುಶ್ಶಾಸನನಂ ||

ವ|| ಆಗಳ್ ಕಾನೀನ ಸೂನು ವೃಷಸೇನ[3]ನೇನುಂ
ಕಾದುತ್ತಿರ್ದನನ್ನೆಗಮಿತ್ತ ನರ ನಂದನನ ಬೞಿವೞಿಯಂ
ಗೞಿವೞಿಯ ಪಾವಿನಂತೆ ಚಕ್ರವ್ಯೂಹಮಂ ಪುಗಲೆಂದು ಬರ್ಪ
ವಿರಾಟ ಧೃಷ್ಟದ್ಯುಮ್ನ ಭೀಮಸೇನ ಸಹದೇವ ನಕುಲ ಯ
ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ ಕಾದುವ ಕುಂಭ
ನಲ್ಲಿಗೆ ದುರ್ಯೋಧನಂ ಬಂದು ನಮ್ಮ ಬಲಮೆಲ್ಲಮಭಿಮನ್ಯುವಿ
ಮೊನೆಯೊಳ್ ತೂಳ್ದು ತೆರಳ್ದೋಡಿದಪ್ಪುದು ನಿಮಗಲ್ಲಿ ಕಾಳೆಗಮ
ಮೇಗೆಯ್ವಮೆನೆ ಸಿಂಧುರಾಜನಿಂದಿನನುವರಕೀಱಿಡೆಯೊಳೆನಿತ
ಮೀಶ್ವರ ವರಪ್ರಸಾದದೊಳಾನೆ ಸಾಲ್ವೆನೆಂದಿಂತೆಂಪಂ—

1 ತ (ಕ). 2 ದೆ (ಕ.ಖ.). 3 ನೊಳಂ (ಕ.), ನುಂ (ಘ.).

ಚಂ || ಉಱದಿದಿರಾಂತು ನಿಂದ ರಿಪು ಸೈನ್ಯಮನಾಹವ ರಂಗದಲ್ಲಿ ತ |
ತ್ತಱದಱದಿಕ್ಕಲಾಂ ನೆಱವೆನಿನ್ನಿರವೇಡ್ದೊಡಗೊಂಡುಪೋಗು ನಿ||
ನ್ನಱಕೆಯ ಕುಂಭಸಂಭವನನೆಂದೊಡೆ ಪಾಂಡವ ಸೈನ್ಯಮಂ ಕಱ |
ತ್ತಿಱವನಿತೊಂದಳುರ್ಕೆ ನಿನಗೇತಱೊಳಾದುದೊ ಪೇೞ್ ಜಯದ್ರಥಾ || ೯೭ ||

ವ|| ಎನೆ ಜಯದ್ರಥನಿಂತೆಂದಂ—

ಮ|| ನರನೊಳ್ ಮುನ್ನಗಪಟ್ಟುದ್ಗೊಂದಟಲೊಳಾಂ ಕೈಳಾಸ ಶೈಳೇಶನಂ |
ಪಿರಿದುಂ ಭಕ್ತಿಯೊಳರ್ಚಿಸುತ್ತುಮಿರೆ ತದ್ದೇವಾಧಿಪಂ ಮೆಚ್ಚಿದಂ ||
ನರನೊರ್ವಂ ಪೊಱಗಾಗಲೊಂದು ದಿವಸಂ ಕೌಂತೇಯರಂ ಕಾದಿ ಗೆಲ್ |
ನಿರುತಂ ನೀನೆನೆ ಪೆತ್ತೆನಾಂ ಬರಮನದ್ರೀಂದ್ರಾತ್ಮಜಾಧೀಶನೊಳ್ || ೯೮ ||

ವ|| ಎಂದ ಸಿಂಧುರಾಜನ ನುಡಿಗೆ ರಾಜಾಧಿರಾಜನೆರಡು ಮುಯ್ವುಮಂ ನೋಡಿ—

ಉ|| ನಿನ್ನನೆ ನಚ್ಚಿ ಪಾಂಡವರೊಳಾಂತಿಱಿಯಲ್ ತಱಿಸಂದು ಪೂಣ್ದೆನಾಂ |
ನಿನ್ನ ಶರಾಳಿಗಳ್ಗಗಿದು ನಿಂದುವು ಪಾಂಡವ ಸೈನ್ಯಮೆಂದೊಡಿಂ ||
ನಿನ್ನ ಭುಜಪ್ರತಾಪದಳವಾರ್ಗಮಸಾಧ್ಯಮಾಯ್ತುದೇಂ |
ನಿನ್ನಳವಿಂದಮಿನ್ನೆನಗೆ ಸಾರ್ದುದರಾತಿ ಜಯಂ ಜಯದ್ರಥಾ || ೯೯ ||

ವ|| ಎಂದು ಪೊಗೞ್ದು ಸಿಂಧುರಾಜನನಿರಲ್ವೇೞ್ದು ಕುಂಭಸಂಭವನುಂ ತಾನುಮಭಿಮನ್ಯುವಿನ ಸಂಗ್ರಾಮ ರಂಗಮನೆಯ್ದೆ ವಂದು—

ಚಂ॥ ಉಡಿದ ರಥಂಗಳಿಟ್ಟೆಡೆಗಳೊಳ್ ಮಕುಟಂಗಳ ರತ್ನದೀಪ್ತಿಗಳ್
ಪೊಡರ್ವಿನಮಟ್ಟಿ ತಟ್ಟಿದ ನಿಜಾತ್ಮಜರಂ ನಡೆ ನೋಡಿ ಕಣ್ಣ
ನಿ
ರೊಡನೊಡ[1]ನುರ್ಚಿ ಪಾಯೆ ಮುಳಿಸಿಂದದನೊಯ್ಯನೆ ತಾಳ್ದಿ
ಕಾಯ್ಪಿನೊಳ
[2]ಕಡಗಿ ಜಗಂಗಳಂ ನೊಣೆದು ನುಂಗಲುಮಾಟಿಸಿದಂ
ಸುಯೋಧನಂ ॥ ೧೦

ವ॥ ಆಗಳ್ ದ್ರೋಣ ದ್ರೋಣಪುತ್ರ ಕೃಪ ಕೃತವರ್ಮ ಕ
ಶಲ್ಯ ಶಕುನಿ ದುಶ್ಶಾಸನ ವೃಷಸೇನಾದಿಗಳಾಳ್ದನ ಮುಳಿದ ಮೊಗವ
ಱಿದು ಧರ್ಮಯುದ್ಧಮಂ ಬಿಸುಟು ನರ ನಂದನನ ರಥಮಂ ಸ
ಮುತ್ತಿಕೊಂಡು—

ಕಂ॥ ತೇರಂ ಕುದುರೆಯನೆಸಗುವ।
ಸಾರಥಿಯಂ ಬಿಲ್ಲನದಱ ಗೊ[3]ಣೆಯುಮನುಱದಾ॥
ದೋರ್ರೂರ್ವರೊಂದನೆಚ್ಚೊಡೆ।
ಬೀರಂ ಗದೆಗೊಂಡು ಬೀರರಂ ಬೆಂಕೊಂಡಂ ॥ ೧೦

ಬೆಂಕೊಳೆ ಕಳಿಂಗ ರಾಜನ।
ನೂಂಕಿದ ಕರಿಘಟೆಯನುಡಿಯೆ ಬಡಿ ಬಡಿದೆತ್ತಂ॥
ಕಿಂಕೋಟಿ[3] ಮಾಟ್ಪುದುಮುಱದೆ।
ಚ್ಚಂ ಕರ್ಣಂ ನಿಶಿತ ಶರದಿನೆರಡುಂ ಕರಮಂ ॥ ೧೦

ಕರಮೆರಡುಂ ಪಱವುದು[4]ಮಾ।
ಕರದಿಂದಂ ತನ್ನ ಕುನ್ನಗೆಯ್ಯೊಳೆ ಕೊಂಡು॥
ದ್ಧುರ ರಥ ಚಕ್ರದಿನಿಟ್ಟಂ।
ತಿರಿ[5]ಪಿ ನರಪ್ರಿಯ ತನೂಜನಕ್ಷೋಹಿಣಿಯುಂ ॥ ೧೦

1 ನೆಚ್ಚು (ಕ. ಖ. ಗ.) 2 ಮುಡುಗಿ ಗಜಂ (ಕ. ಖ.), ಮುಡಗಿ ಗಜಂ (
3 ನೆ (ಕ. ಖ.). 4 ಮಾ। ತು (ಕ.), ಮಾಂ। ಕ (ಗ.) 5 ರು (ಕ. ಖ.)

ವ|| ಆಗಳ್ ದುಶ್ಶ್ಯಾಸನನ ಮಗಂ ಗದಾಯುಧನಱಿಯೆ ನೊಂದ
ಗದ ಮೇಲೆ ಬೆರಗಱಿಯದ ಬೆಳ್ಳಾಳ್ ಪಾಯ್ವಂತೆ ಕಿೞ್ತು ಬಾಳ್ವೆರಸು
ಯ್ವುದುಂ—

|| ಸ್ಫುರಿತ ಕೃಪಾಣ ಪಾಣಿಗಿದಿರಂ ನಡೆದಳ್ಕುಱೆ ತೊಟ್ಟು ವಾಯ್ದು ಡೊ|
ಕ್ಕರದೊಳೆ ಮಿಕ್ಕ ದಿಕ್ಕರಿಯನಿಕ್ಕುವವೋಲ್ ನೆಲಕಿಕ್ಕಿ ಪತ್ತಿ ಕ||
ತ್ತರಿಗೊಳೆ ಕಾಯ್ದು ಕಣ್ತುಮುಟ್ಟುಸಿರ್ ಕುಸಿದಂತಕನಂತಮೆಯ್ದೆ ಮೆಯ್|
ಪರವಶವಾಗೆ ಜೋಲ್ದನಭಿಮನ್ಯು ಭಯಂಕರ ರಂಗಭೂಮಿಯೊಳ್ || ೧೦೪ ||

ಕಂ|| ಅನಿತಣ್ಮಿ ಸತ್ತ ನರನಂ|
ದನಂಗೆ ಕಣ್ ಸೋಲ್ತು ಬಗೆಯದಮರೇಂದ್ರನನಿ||
ನ್ನಿನಗೆ ತನಗೆಂಬ ದೇವಾಂ|
ಗನೆಯರ ಕಳಕಳಮೆ ಪಿರಿದುಮಾಯ್ತಂಬರದೊಳ್ || ೧೦೫ ||

ಅಭಿಮನ್ಯು ಮರಣ ವಾರ್ತಾ|
ಪ್ರಭೂತ ಶೋಕಾಗ್ನಿ ಧರ್ಮ ತನಯನನಿರದಂ||
ದಭಿ[1]ಭವಿಸಿ ತನ್ನನಳುರ್ದಂ|
ತೆ ಭಾಸ್ಕರಂ ಕೆಂಕಮಾದನಸ್ತಾಚಲದೊಳ್ || ೧೦೬ ||

ವ|| ಅಂತು ನಿಜತನೂಜನ ಮರಣ ಶ್ರವಣಾಶನಿ ಘಾತದಿಂ ಕುಳ
ಒಂ ಕೆಡೆವಂತೆ ಕೆಡೆದು ಮೂರ್ಛಾಗತನಾದ ಧರ್ಮಪುತ್ರನಂ ಭೀಮ
ನ ನಕುಳ ಸಹದೇವ ಸಾತ್ಯಕಿ ದ್ರುಪದ ವಿರಾಟಾದಿಗಳಪ[2]ಹತ
ನರ್ ಮುಂದಿಟ್ಟೊಡಗೊಂಡು ಬೀಡಿಂಗೆ ಪೋದರಾಗಳ್ ಧರ್ಮ
ರ್ನನ ಶೋಕಮನಾಱಿಸಲೆಂದು ಕೃಷ್ಣದ್ವೈಪಾಯನಂ ಬಂದು

1 ನ (ಖ. ಫ.). 2 ಹರಿತ (ಖ. ಫ.).

ಸಂಸಾರ ಸ್ಥಿತಿಯನಱಿಯದವರಂತೆ ನೀನಿಂತು ಶೋಕಾ
ನಾದೊಡೆ—

ಚಂ॥ ಎನಿತಿದಿರಾಂತರಾತಿ ಬಲಮಂತನಿತಂ ತವೆ ಕೊಂ[1]ದು ತತ್ಸ
ಧನ ಸುತರೆನ್ನ ಬಾಣ ಗಣದಿಂ ತಪದಿರ್ದರೊ
ಯುದ್ಧದಾಳ್ಗೆ
ದನಮೆನಗಾವುದಯ್ಯನೆನಗೇಕೆಯೊ ಶೋಕಿಪನೆಂದು ಧರ್ಮ
ದನ ನರ ನಂದನಂ ನಿನಗೆ ಸಗ್ಗದೊಳೀನಭಿಮನ್ಯು ನೋಯ
॥ ೧

ಕಂ॥ ಜ್ಞಾನಮಯನಾಗಿ ಸಂಸಾ।
ರಾನಿತ್ಯತೆಯಂ ಜಲಕ್ಕನಾಗಱಿದಿರ್ದ॥
ಜ್ಞಾನಿಯವೋಲ್ [2]ನೀನುಂ ಶೋ।
ಕಾನಲ ಸಂತಪ್ತ ಚಿತ್ತನಪ್ಪುದು ದೊರೆಯೇ ॥ ೧

ವ॥ ಎಂದು ಷೋಡಶ ರಾಜೋಪಾಖ್ಯಾನಮನಱಿಪಿ ಧರ್ಮ
ಶೋಕಮನಾಱಿ ನುಡಿದು ಪಾರಾಶರ ಮುನೀಂದ್ರಂ ಪೋದನಿತ್ತ

ಚಂ॥ ಅಱಿದುದು ಮತ್ತನೂಜ ಶತಮಾಜಿಯೊಳಿತ್ತಭಿಮನ್ಯುವೊ
ತ್ತಱಿವನಿದಾವಗೆಲ್ಲಮೆನ[3]ಗಂ ಕಲಿಯಾದನೊ ಪೂಣ್ದ ಗಂ
ತಱಿಯದೆ ಗಂಡನಿಂತಱಿವುದೀಯಱಿವನ್ನನಗಾಜಿ ರಂಗದ
ಗೞಿಯಿಸುಗೆಂಬಿದಂ ನುಡಿಯುತುಂ ಘಟಸಂಭವನೊಳ್
ಸುಯೋಧನಂ ॥ ೧

ವ॥ ಅಂತು ಬೀಡಿಂಗೆ ಪೋದನನ್ನೆಗಮಿತ್ತ ಸಂಸಪ್ತಕ ಬಳ
ಧಿಯಂ ಬಡಬಾನಳನಳುರ್ವಂತಳುರ್ದು ನಿಜ ವಿಜಯ ಕಟಕಕ್ಕೆ ವಿಜ
ಬರೆವರೆ—

---

1 ದೆನಾ ಸು (ಕ.). 2 ಶೋಕ ಗ್ರಸ। ಮಾನಂ (ಕ.). ಶೋಕನ
(ಖ. ಗ. ಘ.). 3 ಗೇಂ ? (ಪ.).

|| ಹರಿ ನಿಜಯೋಗದಿಂದ್ರಱಿದು ತನ್ನಳಿಯಂ ಲಯಮಾದುದಂ
ಭಯಂ |
ಕರ, ಕಪಿ ಕೇತನಂಗ್ರಱಿಪಲೊಲ್ಲದೆ ಬಂದು, ಶಮಂತ ಪಂಚಕಂ ||
ಬರಮಿೞಿದಲ್ಲಿ ಸಂಗರ ಪರಿಶ್ರಮಮಂ ಕಳೆಯೆಂದು ಮಯ್ದುನಂ |
ಬೆರಸು ಜಳಾವಗಾಹದೊಳಿರುತ್ತೆ ಮಹಾ ಕಪಟ ಪ್ರಪಂಚದಿಂ
|| ೧೧೦ ||

ಕಂ || ಜಳಮಂತ್ರ ಮಂತ್ರಿತಾಶಯ |
ಜಳದೊಳ್ ನರನಿನಿಸು ಮುೞುಗೆ ನಿಜ ಸುತನಸುಹೃ ||
ದ್ಬಳ ಜಳನಿಧಿಯೊಳ್ ಫಲ್ಗುಣ |
ಮುೞುಗಿದನೆಂಬಿದನೆ ನುಡಿದು ಹರಿ ಮುೞುಗುವುದುಂ
|| ೧೧೧ ||

ಭೋಂಕನೆ ಕೇಳ್ದೆರ್ದೆ ಕದಡಿ ಕ |
ಲಂಕಿದ ಬಗೆವೆರಸು ನೆಗೆದು ನಾಲ್ಕುಂ ದೆಸೆಯಂ ||
ಶಂಕಾಕುಳಿತಂ ನೋಡಿ ಮ |
ನಂ [3]ಕೊಳುಕೆನೆ ಮು[4]ೞುಗಿ ನೆಗೆದ ಹರಿಯಂ ನುಡಿದಂ
|| ೧೧೨ ||

ಆಕಾಶ ವಚನಮಿದು ಸುತ |
ಶೋ[5]ಕಮುನೆನಗಱಿಪಿದಪ್ಪುದಸ್ಮತ್ತನಯಂ ||
ಗೇಕೆಂದಱಿಯೆಂ ಮರಣಮು |
ದಾ ಕುರುಪತಿಯಿಂದವಾದುದಾಗಲೆವೇೞ್ಕುಂ || ೧೧೩ ||

ಇಂದಿನ್ನ ಚಕ್ರವ್ಯೂಹಮ |
ನಾಂ ದಲಣಂ ಮೆಚ್ಚಲಾಜಿ[6]ನೆನುತುಂ ರಥಮಂ ||
ಬಂದೇಱಿ ಮಗನ ಮನಕತ |
ಮೊಂದುತ್ತರಮೆರ್ದೆಯನಲೆಯೆ ನರನಿಂತೆಂದಂ || ೧೧೪ ||

---

1 ಕ (ಕ.). 2 ೪ಗಿ (ಖ.), ಳ್ಗಿ (ಗ.), ಳ್ಫಿ (ಘ.). 3 ಕಂತಾನ (ಕ.), ತಾನ (ಖ.), ಕಮು. ನ (ಗ. ಘ.).

ಕಂ ॥ ಕದನದಿನಾಂ ಬರೆ ನಿಚ್ಚಲು ।
ಮಿದಿರ್ವಂದು ಕೊರಲ್ಗೆ ವಾಯ್ದು ಬಾಯಸ್ವಾಂ
ಪಿದಿರ್ಗೊಳೆ ತಂಬುಲಮಂ ಕೊ ।
ಳ್ಳದೆ ಮಾಣ್ದೇ ಮಗನ ತಡವಿದೇನಸುರಾರೀ ॥

ವ॥ ಎನುತ್ತುಂ ಬೀಡನೆಯ್ದೆ ವಂದು ಶೋಕ ಸಾಗರದೊಳ್
ಗಾಡುವ ಪರಿಜನಮುಂ ತನ್ನ ಮೊಗಮಂ ನೋಡಲ್ ನಾಣ್ಚಿ
ಬಾಗಿ ನೆಲನಂ ಬರೆಯುತ್ತುಮಿರ್ದ ವೀರ ಭಟರುಮಂ ಕಂಡು
ಸಾವಂ ನಿಶ್ಚೈಸಿ ರಾಜ ಮಂದಿರಮಂ ಪೊಕ್ಕು ರಥದಿಂದಮಿೞಿದು
ಪುತ್ರಂಗಂ ಪಾಯುಪುತ್ರಂಗಂ ಪೊಡೆವಟ್ಟು ಕುಳ್ಳಿರ್ಪುದುಮವರ್
ಬಾಗಿ ನೆಲನಂ ಬರೆಯುತ್ತುಮಿರೆ ಕಿರೀಟಿ ಕಂಡಿದೇನೆಂದು
ಧರ್ಮಪುತ್ರನಿಂತೆಂದಂ—

ಮ॥ಸ್ರ॥ ಗುರು ಚಕ್ರವ್ಯೂಹಮಂ ಪಣ್ಣಿದೊಡೆ ಪುಗಲಿದಂ ಬಲ್ಲರಾ
ದೊಡಿ
ನಿರೆ ಮತ್ತಾರ್ ಬಲ್ಲರೆಂದೊರ್ವನೆ ರಿಪು ಬಳ ವಾರಾಶಿಯಂ
ಮಿ
ತರನಾಟಂದಿಕ್ಕಿ ದುರ್ಯೋಧನನ ತನಯರಂ ನೂರ್ವರಂ
ಗರದೊಳ್ ಕಾದೆಮ್ಮನಿಂತಾಂತಿಱಿದು ನಿಜಸುತಂ ದೇವಲೆ
ಸಂದಂ ॥

ಮ ॥ ಬರಮಂ ಬಾಳ ಶಶಾಂಕಮೌಳಿ ಕುಡೆ ಪೆತ್ತೊಂದುರ್ಕಿನಿಂ

ತು ರಣೋತ್ಸಾಹದಿನೆಮ್ಮನೊರ್ವನೆ ಭರಂಗೆಯ್ದತ್ತ ದುಯೆ
ಬೆರಸಾ ದ್ರೋಣನನಟ್ಟೆ ಸಿಂಧು ವಿಷಯಾಧೀಶಂ ಪೊದಟ
ಚ್ಚರದಿಂ ನಿನ್ನ ತನೂಜನಂ ಕೊಲಿಸಿದಂ ಮತ್ತಾಂತವರ್
ಕೊಲ್ವರೇ ॥

ಕೊ ಲ್ವ

ವ॥ ಎಂಬುದುಂ ಪ್ರಚಂಡ ಕೋಪ ಪಾವಕ ಪ್ರಶಮಿತ ಶೋಕ
ನುಮುನ್ನತ ಲಲಾಟ ತಟ ಘಟಿತ ಭೀಷಣ ಭ್ರುಕುಟಿಯುಂ ಕಲ್ಪಾಂತ
ಕರ ದುರ್ನಿರೀಕ್ಷನುಮುತ್ಪಾತ ಮಾರುತನಂತೆ ಸಕಲ ಭೂಭೃತ್ಕಂಪ
ಿಯುಂ ವಿಂಧ್ಯಾಚಳದಂತೆ ವರ್ಧಮಾನೋ[1]ತ್ಸೇಧನುಮಂಧಕಾರಾತಿ
ಂತೆ ಭೈರವಾಕಾರನುಮಾಗಿ—

॥ ರಸೆಯಿಂ ಭೂತಳದಿಂ ಕುಳಾದ್ರಿ ಕುಳದಿಂ ದಿಗ್ದಂತಿಯಿಂ
ವಾರ್ಧಿಯಿಂ।
ದೆಸೆಯಿಂದಾಗಸದಿಂದಜಾಂಡ ತಟದಿಂ[2]ದತ್ತೆಲ್ಲಿ ಪೊಕ್ಕಿರ್ದುಮಿಂ॥
ಮಿಸುಕಲ್ ತೀರ್ಗುಮೆ ವೈರಿಗೆನ್ನ ಸುತನಂ ಕೊಂದಿರ್ದುದಂ
ಕೇಳ್ದು ಸೈ।
ರಿಸಿ ಮಾಣ್ದಿರ್ದಪೆನಿನ್ನುಮೆಂದೊಡಿದನಾಂ ಪೇೞ್ದೀತಜಿೞೊಳ್
ನೀಗುವೆಂ ॥ ೧೧೮ ॥

ಕಂ॥ ಬಳೆದ ಸುತ ಶೋಕದಿಂದೀ।
ಗಳೆ ಸುರಿ[3]ಗುಮೆ ಸುರಿಯವಾ ಜಯದ್ರಥನ ಚಿತಾ॥
ನಳನಿಂದಮೊಗೆದ ಪೊಗೆಗಳ್।
ಕೊಳೆ ಸುರಿವೊಡೆ ಸುರಿವುವೆನ್ನ ನಯನ ಜಲಂಗಳ್॥೧೧೯॥

ಬಿಸಜಭವನಕ್ಕೆ ಮೃಡನ।
ಕ್ಕಸುರಾಂತಕನಕ್ಕೆ ಕಾವೊಡಂ ನಾಳಿನೊ[4]ಳ॥
ರ್ವಿಸೆ ಕೊಂದು ಸಿಂಧು ರಾಜನ।
ಬಸಿಱಿಂ ಪೋೞ್ದೆನ್ನ ಮಗನನಾಂ ತೆಗೆಯದಿರೆಂ॥ ೧೨೦॥

ಕೊಂದೆನ್ನ ಮಗನನಿಂ ಭಯ।
ದಿಂದಂ ರಸೆವೊಕ್ಕುಮಜನ ಗುಂಡಿಗೆವೊಕ್ಕುಂ॥

1 ತ್ಸಕ (ಕ. ಖ. ಗ. ಘ.). 2 ದಂತೆ (ಖ. ಗ. ಘ.). 3 ವುವು (ಕ. ಖ.
.). 4 ಳು। ರ್ವಿಸಿ (ಕ.).

ಮಂದರ ಧರ[1]ನೀ ಪೊರ್ಕುಟಿ ।
ಪೊಂದಾವರೆಪೊಕ್ಕು ಮೇ[2]ಣವಂ ಬರ್ದುಕುವನೇ ॥ ೧೨

ಚಂ॥ ಪಡೆ ಪಡೆಮೆಚ್ಚೆಗಂಡನೆನೆ ಸಂದರಿಕೇಸರಿಯೆಂಬಗುರ್ವು ನೇ ।
ರ್ಪಡೆ ನೆಗಬ್ದಾನ[3]ಣಂ ಸಡೆದು ಮಾಣ್ಬೆನೆ ನಾಳೆ ದಿನೇಶನಸ್ತವ
ತ್ತುಡುಗದ ಮುನ್ನ ಸೈಂಧವನಗುರ್ವಿಸೆ ಕೊಲ್ಲದೊಡೇನೊ
ಗಾಂಡಿವ
ಬಿಡಿದೆನೆ ಚಿಃ ತೊವಲ್ಪಿಡಿದೆನಲ್ಲೆನೆ ವೈರಿಗೆ ಯುದ್ಧರಂಗದೊಳ್
॥ ೧೨

ವ॥ ಎಂದು ನೃಪ ಪರಮಾತ್ಮಂ ಕೃತಪ್ರತಿಜ್ಞನಾದುದಂ ಸೈಂ
ನಸಜ್ಜನಂದುಜ್ಜೋದನನ ತಂಗೆ ದುಶ್ಶಳೆ ಕೇಳ್ದು ಮಲಮಲ ಮ
ತಮ್ಮಣ್ಣನಲ್ಲಿಗೆ ವಂದು ಕಾಲಮೇಲೆ ಕವಿದು ಪಟ್ಟು—

ಕಂ॥ ತನ್ನ ಸುತನಟಿಯಲ[4]ಟಿಯಲ್ ।
ನಿನ್ನಯ ಮಯ್ದುನನರ್ಜುನಂ ಪೂಣ್ದಾನದ ॥
ರ್ಕಾನ್ನಡುಗಿ ಬಂದೆನಿನ್ನೀ ।
ನೆನ್ನೋಲೆಯ ಕಡಗದಟಿವನೇಂ ನೋಡಿದಪಾ ॥ ೧೨

ವ॥ ಎಂಬುದುಂ ಸುಯೋಧನಂ ಮುಗುಳ್ನಗೆ ನಕ್ಕಿಂತೆಂದಂ—

ಕಂ॥ ಮರುಳ್[5]ಕ್ಕ ಮಗನ ಶೋಕದಿ ।
[6]ನುರುಳ್ದುಂ ಪೂಣ್ದವನ ಪೂಣ್ಕೆ ದುಶ್ಶಾಸನನೊಳ್ ॥
[7]ಕರತನದಿಂಪೆನ್ನೊಳವಾ ।
ಮರುತ್ಸುತಂ ಪೂಣ್ದ ಪೂಣ್ಕೆಯಂತೆವೊಲಕ್ಕುಂ ॥ ೧೨

1 ನಾ? (ಪ.). 2 ನ (ಕ.). 3 ಳಂ (ಖ.ಗ.ಘ.). 4 ಬಿಲೊಳ್ (ಕ.ಘ.
ಲೊಲಳಿಯಲ್ (ಖ.), ಣಲೊಳ್ (ಗ.), ಳೊಳಳಿಯಲ್ (ಘ.). 5 ಕ್ಕೆ (ಕ. ಖ
6 ಮ (ಗ. ಘ.). 7 ತರತಮ (ಕ.), ಕರತವ (ಖ.,

ಕೃತ ವಿವಿಧಾಸ್ತ್ರ[1]ಶಸ್ತ್ರ ಯಮಪುತ್ರ ಮರುತ್ಸುತ[2]ಯಜ್ಞಸೇನರು।
ದ್ಧತ ಬಳರೆತ್ತಿ ಕಾದಿ ಸುಗಿದೋಡಿದರಲ್ಲ[3]ರೆ ಕಾವರೀ ವಿವಿಂ॥
ಶತಿ ಕೃಪ ಕರ್ಣ ಶಲ್ಯ ಕಳಶೋದ್ಭವ ತತ್ಪ್ರಿಯ ಪುತ್ರರೆಂದೊಡ।
ಪ್ರತಿರಥನಂ ಜಯದ್ರಥನನಾಜಿಯೊಳೆಯ್ತರೆ ವರ್ಪ ಗಂಡರಾರ್
॥೧೨೫॥

ವ॥ ಎಂದು ದುಶ್ಶಳೆಯನೊಡಗೊಂಡು ಕುಂಭ ಸಂಭವನಲ್ಲಿಗೆ
ತೆಂದಂ—

ಸ್ರ॥ ಸುತ ಶೋಕೋದ್ರೇಕದಿಂ ಸೈಂಧವನನಟಿವೆನೆಂದರ್ಜುನಂ
ಪೂಣ್ದನಿಂತೀ।
ಬಂದಳ್ ಕಾವುದಾತ್ಮಾನುಜೆಯ ಕಡಗಮಂ ನೀಮೆ ಮಾರ್ಕೊ
ಳ್ವೊಡಾರ್ ತಾ॥
ತರರ್ ಮುಟ್ಟಲ್ ಸಮರ್ಥರ್ ಕದನದೊಳೆನೆ ಗೆಲ್ವಾಸೆಯಂತಿರ್ಕೆ
ಸಿಂಧು।
ಪಂ ತಾನೇ[4]ನನಾದಂ ರಣದೊಳದನೆ ಪೋಗಾನುಮಪ್ಪೆಂ
ನರೇಂದ್ರಾ॥೧೨೬॥

ಬಿಜಯಂಗೆಯ್ಯೆನೆ ಪೋಪುದುಂ ನೃಪನದಂ ಧರ್ಮಾತ್ಮಜಂ ಕೇಳ್ದು
ಪೇ।
ಜಿತಂಗಾ ಹರಿ ಪೇಟ್ದೊಂದು ನಯದಿಂದಾ ರಾತ್ರಿಯೊಳ್
ಪೋಗಿ ಕುಂ॥
ಜನಂ ಕಂಡು ವಿನಮ್ರನಾಗಿ ನುಡಿದಂ ನೀಮಿಂತು ಕೆಯ್ಕೊಂಡು
ಕಾ।
ಜಗತ್ಪೂಜಿತ ಬೆಟ್ಟನಾದೊಡೆಮಗಿಂ ಬಾಟ್ವಾಸೆಯಾವಾಸೆಯೋ
॥೧೨೭॥

ರಪ್ಪ (ಘ§.). 2 ಯಾ (ಕ.). 3 ದೆ (ಕ. ಖ.). 4 ರಿ (ಖ. ಗ. ಘ.)
ಕ. ಖ.).

ಕಂ || ನಿಮ್ಮಳವನಱಿದು ಮುನ್ನಮೆ |
ನಿಮ್ಮಂ ಪ್ರಾರ್ಥಿಸಿದೆ[1]ಮೀಗಳದುವಂ ಮಱೆದಿರ್ ||
ನಿಮ್ಮಯ ಧರ್ಮದ ಮಕ್ಕಳೆ |
ವೆಮ್ಮಂ ಕಡೆಗಣಿಸಿ ನಿಮಗೆ ನೆಗೞ್ವುದು ದೊರೆಯೇ ||೧

ಎನೆ ಗುರು ಕರುಣಾ ರಸಮುದು |
ಮನದಿಂ ಪೊಱಪೊಣ್ಮೆ ನಿನಗೆ ಜಯಮಕ್ಕುಮನಂ ||
ತನ ಪೇೞ್ದು ತೆಱದೆ ನೆಗೞೆನೆ |
ವಿನಯದೆ ಬೀೞ್ಕೊಂಡು ನೃಪತಿ ಬೀಡಂ ಪೊಕ್ಕಂ ||೧

ವ|| ಆಗಳಾರೂಢ ಸರ್ವಜ್ಞಂ ಪ್ರತಿಜ್ಞಾರೂಢನಾಗಿ ಗಂಗಾ
ತರಂ ಗೋಪಮಾನ ದುಕೂಲಾಂಬರ ಪರಿಧಾನನುಮಾಗಿ ಧವಳ ಶ
ತಳದೊಳ್ ಮಱೆದೊಱಗಿದ [ನ] ಮೋಘಾಸ್ತ್ರ ಧನಂಜಯನಂ ಪು
ಕಾಕ್ಷಂ ನೋಡಿ—

ಚಂ || ಅರಿದು ಕೊಲಲ್ಕೆ ಸೈಂಧವನನಾಜಿಯೊಳೀತನ ಪೂಣ್ದು
ಪೂಣ್ಕೆಯ
ಪಿರಿದವನುಗ್ರ ಪಾಶುಪತ ಬಾಣದಿನಲ್ಲದೆ ಸಾಯನಂತದಂ ||
ಹರನೊಸೆದಿತ್ತುಮೇ[2]ನವಱ ಮುಷ್ಟಿಯನೀಯನೆ ಬೇಡವೇೞ್ಪು
ದರದದನೆಂದು ಚಕ್ರಿ ಶಿವನಲ್ಲಿಗೆ ಕೊಂಡೊಗೆದಂ ಕಿರೀಟಿಯಂ
|| ೧

ವ|| ಅಂತು ಮನಃಪವನ ವೇಗದಿಂ ಕೈಳಾಸ ಶೈಳಮ
ಕದನ ತ್ರಿಣೇತ್ರನಂ ತ್ರಿಣೇತ್ರನ ಮುಂದಿೞಿಪುವುದುಮಭವಂ
ಪಾದಪದ್ಮಂಗಳ್ಗೆಱಗಿದತಿರಥಮಥನನುಮಂ ಮಧುಮಥನನುಮನ
ದೃಷ್ಟಿಯಿಂ ನೋಡಿ ಪಾಶುಪತದ ಮುಷ್ಟಿಯಂ ಬೇಡಲೆಂದು ಬಂದ
ತನ್ನ ದಿವ್ಯ ಜ್ಞಾನದಿಂದಮಱಿದು—

---

1 ನೀ (ಕ.ಖ.), 2 ಣ (ಕ. ಖ,)

ಕಂ|| ಅಪಗತ ಕಪಟದೆ ನಟನದ |
ನುಪದೇಶಂಗೆಯ್ದು ಪರಸಿ ಪೋಗೆನೆ ಪೊಡೆಮ ||
ಟ್ಟು ಪಸಾದಮೆಂ[1][ದ] ಹರಿಗನ |
ನುಪೇಂದ್ರನಾ ದರ್ಭಶಯನ ತಳಕಿಱಿಪುವುದುಂ || ೧೩೧ ||

ನ|| ಅಂತುದಾರ ಮಹೇಶ್ವರನೀಶ್ವರ ವರ ಪ್ರಸಾದಮೆಲ್ಲಂ ತನಗೆ
ಗೆಯುಂ ಕನಸಿನಂದಮಾಗಿ ತೋಱೆ ಮಂಗಳ ಪಾಠಕ ರವಂ
ಭೋಂಕನೆಚ್ಚಿತ್ತನ್ನೆಗಂ—

ಕಂ|| ತನ್ನ ಸುತನಟಿಲೊಳರ್ಜುನ |
ನೆನ್ನುದಯಮನೆಯ್ದೆ ಪಾರ್ದು ಪಗೆವರ ಬೇರೊಳ್ ||
ಬೆನ್ನೀರನೆಱೆಯದಿರನದ |
ನಾನ್ನೋಡುವೆನೆಂಬ ತೆಱದಿನಿನನುದಯಿಸಿದಂ || ೧೩೨ ||

ನ || ಆಗಳುಭಯ ಸೈನ್ಯಾಂಬುರಾಶಿಗಳಂಬುರಾಶಿಗಳ್ ನೆಲೆಯಿಂ
ಂತೆ ತಳರೆ ಕಳಶ ಸಂಭವನಂದಿನನುವರದೊಳ್ ತನ್ನಂ ಪರಿಚ್ಛೇದಿಸಿ
ಕಳಶ ಸಂಭೃತ ಮಂಗಳ ಜಳಂಗಳಂ ಮಿಂದು ಧವಳ ವಸನ
ಲಾಂಬರ ಮಂಗಳ ವಿಭೂಷಣನುಂ ನಿರ್ವರ್ತಿತ ಸಂಧ್ಯೋಪಾಸ
ಪರಿಸಮಾಪ್ತ ಜಪನುಮರ್ಚಿತ ಶಿತಿಕಂಠನುಮಾಹುತಿ ಹುತಾಗ್ನಿ
ನುಂ ಪೂಜಿತ ಧರಾಮರನುಂ [2]ನೀರಾಜಿತ ರಥ ತುರಗನುಮಾಗಿ
ರಥಮನೇಱಿ ಸಂಗ್ರಾಮ ಭೂಮಿಯನೆಯ್ದೆವಂದು ಸಾಮಂತ
ಮಣಿಯನಿನಿಸು ಮಾರ್ಕೊಂಡು ನಿಲ್ವೊಡಂ ಸಿಂಧುರಾಜನಂ
ಡಮನೇಕವ್ಯೂಹ ರಚನೆಯೊಳಲ್ಲದೆ ಗೆಲಲ್ ಬಾರದೆಂದು ಚಕ್ರ
ನುನಿದಿರೊಳೊಡ್ಡಿ ಸಕಳ ಸಾಮಂತ ಚಕ್ರಮನಿರಲ್ವೇಟ್ಟಲ್ಲಿಗೆ
ಂ ಯೋಜನದ ಪದುಮ ವ್ಯೂಹದೊಳಂಗರಾಜ ಶಲ್ಯ ವೃಷಸೇನ
ಕೃತವರ್ಮಾಶ್ವತ್ಥಾಮರಂ ದುರ್ಯೋಧನಂ ಬೆರಸಿರಿಸಿ ಮತ್ತಿತ್ತ

ದು (ಸ.), 2 ವಿ (ಖ. ಗ. ಘ.).

ಮಂಗಳ
- 3.

ನಾಲ್ಕು ಯೋಜನವ ಶಕಟ ವ್ಯೂಹದ ಬಾಗಿಲೊಳ್ ಬಾಹ್ಲೀಕ
ದತ್ತ ವಿಂದಾನುವಿಂದರೊಡನೆ ಸಂಸಪ್ತಕರನಿರಿಸಿ ಶಕಟ ವ್ಯೂಹದ
ನಾಲ್ಕು ಯೋಜನದೊಳರ್ಧಚಂದ್ರ ವ್ಯೂಹದೊಳಧಿಕ ಬಲರಪ್ಪ
ದುಶ್ಶಾಸನಾದಿ ಪ್ರಧಾನ ವೀರ ಭಟ ಕೋಟಿಯ ನಡುವೆ ಸಿಂಧ
ನಿರಿಸಿ ಮೊದಲ ಚಕ್ರವ್ಯೂಹದ ಬಾಗಿಲೊಳ್ ಶರಾಸನಾಚಾರ್ಯ
ನಿತ್ತ ಪಾಂಡವ ಬಲಮೆಲ್ಲಮುಂ ವಿಕ್ರಮಾರ್ಜುನನುಂ ವಜ್ರಪಂ
ಭೇದ್ಯಮಪ್ಪ ವಜ್ರವ್ಯೂಹಮನೊಡ್ಡಿ ಧರ್ಮರಾಜನೊಡನೆ ಭೀಮ
ಸಹದೇವ ಸಾತ್ಯಕಿ ಧೃಷ್ಟದ್ಯುಮ್ನ ಘಟೋತ್ಕಚ ಪ್ರಮುಖನಾ
ಪೇಳ್ದು ದ್ರುಪದ ವಿರಾಟ ಶಿಖಂಡಿ ಯುಧಾಮನ್ಯೂತ್ತಮೌಜಃ
ಪ್ರಧಾನ ನಾಯಕರಂ ತನ್ನೊಡನೆ ಕೂಡಿಕೊಂಡು ನಿಜಾ
ಬೀೞ್ಕೊಂಡು ನಿಜ ರಥಮಂ ರಥಾಂಗಧರನಂ ಮುನ್ನಮೇಱ
ಮೂಱು ಸೂೞ್ ಬಲವಂದು ಪೊಡಮಟ್ಟು ರಥಮನೇಱಿ ವ
ಚಮಂ ತೊಟ್ಟು ತವದೊಣೆಗಳನಮರೆ ಬಿಗಿದು ಗಾಂಡೀವವ
ನೀವಿ ಜೇವೊಡೆದಾಗಳ್—

ಪೃಥ್ವಿ || ಭವಂ ಭವನ [1]ಗೋತ್ರದಿಂ ಧಜನಜಾಂಡದಿಂ ಭಾನು ಭ
ನು ವೀಧಿಯನಿಳಾ ತಳಂ ತಳದಿನೆಯ್ದೆ ಕಿೞ್ತಿಟ್ಟು ತೂ ||
[2]ಳ್ವವಾರ್ಯ ಭುಜ ವೀರ್ಯಮಂ ನೆಱೆಯೆ ತೋರ್ಪಿನಂ

ಭವಂ ಮ[3]ರಲೆ ತಾಗಿದಂ ರಿಪು ಕುರಂಗ ಕಂಠೀರವಂ ||

ವ || ಅಂತು ತಾಗಿ ಚಕ್ರವ್ಯೂಹದ ಬಾಗಿಲೊಳ್ ತನ್ನಂ ಪು
ದಡ್ಡವಾಗಿನಿಂದ ಕಾರ್ಮುಕಾಚಾರ್ಯನನುಱೆ ಸೆಱೆಗೆಯ್ಯದೆ
ಸ್ತ್ರಮನೆಚ್ಚು ವಿನಯಮನೆ ಮುಂದಿಟ್ಟು ಬಲವಂದು ಪೊಡೆಮಟ್ಟು
ವೋಗೆ—

1 ಗಾ (ಖ. ಗ. ಘ.). 2 ಳ್ವ (ಕ. ಗ.). 3 ಲರೆ (ಗ. ಘ.)

। ಕಮನೀಯಂ ಬಲವಂದು ಪೋಪನನೆಲೇ ಪೋಪೋಗದಿರ್
ಪೋಗದಿರ್ ।
ಸಮರಕ್ಕೆನ್ನೊಡನಂಜಿ ಪೋದೆಯೆನಲಿಂತೆಂ[1]ದಂ ನರಂ
ದ್ರೋಣರಂ ॥
ನಿಮಗಾನಂಜುವುದೆನ್ನ ಬಾ[2]ಲತನದಿಂದಂದಾದುದಿಂದಾದುದೇ ।
ನಿಮಗಾನಂಜದೊಡಂಜಿಸಲ್ ನೆಱೆ[3]ವೆನೇ ತ್ರೈಲೋಕ್ಯಮಂ
ಯುದ್ಧದೊಳ್ ॥ ೧೩೪ ॥

ವ॥ ಅಂತು ವಿನಯಮನೆ ನುಡಿದ ವಿಕ್ರಮಾರ್ಜುನನಂ ಗುರುವ
ಾಶೀರ್ವಚನಂಗಳಿಂ ಪರಸುವುದುಂ ಪದುಮನಾಭನ ಚೋದಿಸುವ
ವೇಗದಿಂ ಪದ್ಮವ್ಯೂಹಮನೆಯ್ದೆವಂದು ಸುಯೋಧನನ ಸಾಧನ
ಳ್ ತಾಗಿದಾಗಳ್—

। ಪೊಸಮುಸೆಯಂಬು ಕಾರ ಮಱೆ[3]ಪೋಲ್ ಕಱೆ[3]ಯುತ್ತಿರೆ ನೇರ್ದು
ಸೀಳ್ದು ಖಂ ।
ಡಿಸಿ ಕಡಿದೊಟ್ಟೆ ಸುಟ್ಟನಿತುಮಂ ನಿಜ ಮಾರ್ಗಣ ಕೋಟಿಯಿಂ
ದಗು ॥
ರ್ವಿಸೆ ತೆಗೆದೆಚ್ಚು ತನ್ನ ಮೊನೆಯಂಬುಗಳಿಂ ಚತುರಂಗಮೆಯ್ದೆ ಕೀ।
ಲಿಸೆ ಪಡೆ ಚಿತ್ರದೊಂದೆ ಪಡೆಯಂತೆವೊಲಾಯ್ತು ಕಳಂಕ ರಾಮನಿಂ
॥ ೧೩೫ ॥

ಅಡಿ ತೊಡೆ ಪೊರ್ಕುಟಿಂ ತೆಗಲೆ ಕೈ ಕ[3]ಣಕಾಲ್ ಕೊರಲೆಂಬಿವುಂ
ಬೆರಲ್ ।
ನಡುವುರ ಬೆನ್ ಬಸಿಱುರ್ ತೊಳಕು ಕ[4]ರ್ಚರಿಮುಯ್ಯು ಮುಸುಂಬು
ಮೂಗು ಪೆ ॥

1 ದುಂ (ಖ.). ಗುಂ.(ಗ.ಘ.). 2 ಲ್ಯ (ಖ. ಗ. ಘ.) 3 ಱೆ (ಕ. ಗ.).
ಡೆ (ಖ.), ಜಱರೆ (ಗ. ಘ.).

ದೋರ್ಡಿ ಕಟಿ ಮುಂಮುಡಂ ಪರಡು ಸಂದಿ ಸೊಸಲ್ ಪಣೆ ಕಣ್
ಕದಂಪಿವೆಂ
ಬಿಡೆಯುನೆ ನಟ್ಟು ಪುರ್ಚಿದುವು ನೇರ್ದುವು ಸೀಳ್ದುವು ಪಾರ್ಥ
ನಂಬುಗಳ್ ॥ ೧೩೬

ವ॥ ಅಂತು ಮಾಜಿರಾಂತ ಮಾರ್ಪಡೆಯೆಲ್ಲಮುಂ ಜವನೊಕ್ಕಲಿ
ತನ್ನೊಳ್ ಪೋಗಡೆ ಪೆಣೆದ ಬಾಹ್ಲೀಕ ಸೋಮದತ್ತ ಭೂರಿಶ್ರವರನ
ಮೆಟ್ಟಿದ ಕುಳುಂಪೆಯ ನೀರಂತೆ ದೆಸೆ ದೆಸೆಗೆ ಸೂಸುವನ್ನೆಗಮೆಬ್ಬಿ
ಕಾಂಭೋಜ ಸುದಕ್ಷಿಣ ಜಯತ್ಸೇನರೆಂಬ[1]ರಿಯ್ತುರಿ ಮೂವರಕ್ಷೋಹಿಣಿ
ಪತಿಗಳ್ವೆರಸು ನಾಲ್ಸಾಸಿರ್ವರ್ ಮುಕುಟವರ್ಧನರಂ ಕೊಂದು ಶ
ನುರಮಂ ಬಿರಿಯೆಚ್ಚು ಕೃಪರಂ ವಿರಥರ್ಮಾಡಿ ನಡುವಗಲಿಱುವಿನಂ ಕಾ
ಬಱಲ್ದ ಕುದುರೆಗಳಂ ನೀರೊಳಿಕ್ಕಲೆಂದು ದೇವಖಾತಮೆಂಬ ಮಡುವಿ
ಬರ್ಪುದುಮಿತ್ತ ದುರ್ಯೋಧನಂ ದ್ರೋಣರಲ್ಲಿಗೆ ವಂದು—

ಚಂ॥ ಅಱಿದುದು ಚಾತುರಂಗ ಬಲಮುಳ್ಳುಱಿದಾಂತ ಮಹಾರಥರ್ಕಳು
ಕಱಿಕುಱಿಮಾದುದೊಡ್ಡಣಮಣಂ ತಲೆದೋಱಲೆ ಗಡರಿಲ್ಲ ತೊ
ತ್ತುಱಿದುಱಿದಪ್ಪುನಿನ್ನಿನಿಸು ಬೇಗದೆ ಸೈಂಧವನಂ ನೆಗಱ್ತಿಯಂ
ಗಱಿಯಿಸಿಕೊಳ್ಳೊಡಿನ್ನಿನಿಸು ನಿಂದಿಱಿಯಿಂ ತಱಿಸಂದು
ಪಾರ್ಥನೊಳ್ ॥ ೧೩೭

ವ॥ ಎಂಬುದುಂ ದ್ರೋಣಾಚಾರ್ಯಂ ಮುಗುಳ್ನಗೆ ನ
ವಿಕ್ರಮಾರ್ಜುನನನಿಳಿಸಿ ನುಡಿವ ನಿನ್ನೆಣಗೋಣಂಗಳುಮಿಕ್ಕ ಸಕ
ನಂಗಳುಮೆತ್ತವೋದವು—

ಚಂ॥ ನಿನಗರಸಾಳ್ತನಂ ನುಡಿವ ಬೀರರ ಬೀರದ್ವಳ್ಕೆ ವಿಕ್ರಮಾ
ರ್ಜುನನೊಳದೇಕೆ ಸ[2]ಲ್ಲದೆನಗಾತನಸಾಧ್ಯನವಧ್ಯ ನಾನುಮೀ
ಮೊರೆಯಾಳೆ ನಿಂದು ಕಾದಿದಪೆನನ್ನೆಗಮೆನ್ನ ವರೂಥ ಸೂತ ಕ
ತನ ಕವಚಂಗಳಿಂ ನೆಱೆದು ತಳ್ತಿಱಿ ನೀಂ ಜಗದೇಕಮಲ್ಲನೊ
॥ ೧೩೮

1 ತಂದೆ ಮೂ (ಗ.). ತಂದೆ ವಾ (ಘ.). 2 ಲ್ವ (ಖ. ಗ. ಘ.).

ವ॥ ಎಂಬುದುಂ ಸುಯೋಧನನೇನಾದೊಡೇನಾದುದೆನ್ನ ಪಗೆಯ
ಾನೇ ಕೊಲ್ವೆನೆಂದಭೇದ್ಯ ಕವಚಮುಂ ತೊಟ್ಟು ದಿವ್ಯ[1]ಶರಾಸನ ಶರಂ
ಳಂ ಕೊಂಡು ಕಳಶ ಕೇತನ ವರೂಥನಾಗಿ ಪೋಗಿ—

ಕಂ॥ ತಡೆಯದೆ ರಾಜರಾಜನಿದಿರಂ ಬರೆ ಭೋರ್ಗರೆದೆಚ್ಚೊಡಂಬುಗಳ್ ।
ನಡದೆ ಸಿಡಿಲ್ವುದುಂ ಕರತಳದ್ವಯಮುಂ ಬಿರಿಯೆಚ್ಚು ಕೆಯ್ದುವಂ।
ಪಿಡಿವದಟಿಲ್ಲಮಂ ಕಿಡಿಸಿ ತಾಂ ಕೊಲಲೊಲ್ಲ[2]ನೆ ಭೀಮನಾತನಂ ॥
ಮುಡಿಪುವೆನೆಂದ ಪೂಣ್ಕೆ ಪುಸಿಯಾದಪುದೆಂದಮರೇಂದ್ರ ನಂದನಂ
॥ ೧೩೯ ॥

ವ॥ ಅನ್ನೆಗಮಿತ್ತ ಧರ್ಮಪುತ್ರನವೋಘಾಸ್ತ್ರ ಧನಂಜಯನಂ
ಯ್ಯೊಳಲಟ್ಟಿದೊಡೆ ಕೌರವ ಬಳ ಜಳನಿಧಿಯ ನಡುವನುತ್ತರಿಸಿ [3]ಬರ್ಪ
ಾತ್ಯಕಿಯಂ ಭೂರಿಶ್ರವನೆಡೆಗೊಂಡಾಂತು—

ು ॥ ಪೋಗದಿರೆಂದು ಮೂದಲಿಸೆ ಸಾತ್ಯಕಿ ತೀವ್ರ ಶರಾಳಿಯಿಂದಗು ।
ರ್ವಾಗೆ ವರೂಥಮಂ ಕಡಿದೊಡುರ್ಚಿದ ಬಾಳ್ವಿರಸಾತನೆಯ್ದೆವಂ॥
ದಾಗಳಿದಿರ್ಚೆ ತಾನುಮುಸಿಯಂ ಸೆರಗಿಲ್ಲದೆ ಕಿಟ್ಟಿ ಪಾಯ್ದುಭೂ ।
ಭಾಗ ನಭೋವಿಭಾಗ[4]ವರಮುಳ್ಕುಱೆ ತಳ್ತಿಱಿದರ್ ವಿರೋಧಿಗಳ್
॥ ೧೪೦ ॥

ವ॥ ಅಂತಿರ್ವರುಮೋರೊರ್ವರೊಳ್ ಬೀರಮುಮಂ ಬಿಂಕಮುಮಂ
ಮೆಱೆದು [5]ದಾಸವಣ ದಂಡೆಯಂ ತೋರದಿಂಡೆಯಾಡಿದಂತೆ ದೆಸೆ ದೆಸೆಗೆ
ಿದಱುವ ಕಂಡ ದಿಂಡೆಗಳುಂ ನಾರಂಗ ಸಕಳ[6]ವಟ್ಟೆಯ ಪಟಿಯಿಗೆಗಳಂತೆ
ಭಕ್ಕೆ ಮಿಳಿರ್ದುಮಿಳ್ಳಿಸಿ ಪಾಱುವ ನೆತ್ತರ ಸುಟ್ಟುರೆಗಳುಮತಿಭಯಂಕರಾ
ಾರಮಾಗೆ ಕಾದಿಬಸವಱಿದ ಸಾತ್ಯಕಿಯಂ ಭೂರಿಶ್ರವನಶ್ರಮದೊಳ್
ಲಕಿಕ್ಕಿ ಗಂಟಲಂ ಮೆಟ್ಟಿ ತಲೆಯನರಿವಾಗಳ್ ಸಾತ್ಯಕಿ ಭೂಮಿ ಯುದ್ಧ

1 ಶರಾಸನಂಗಳಂ ಕೊಂಡು (ಖ.ಗ.ಘ.) 2 ದೆ (ಕ.ಖ.ಗ.). 3 ಬರ್ಪ ಸಾತ್ಯ
ಯಂ (ಘ§.ಪ್ರತಿಯಲ್ಲಿ ಮಾತ್ರವಿದೆ). 4 ಮಿರದ (ಪ.). 5 ದಾಸಣ (ಖ.).
ವಟ್ಟಗೆ (ಕ.).

ಪ್ರವೀಣಸಪ್ಪ ವಜ್ರಪಾತನ ಬಾಳ ಬಾಯೊಳ್ ಚಕ್ರಾಕೃ
ತಲೆಯಂ ತಿರುಪ್ರತ್ತುಮಿರ್ದಾಗಳದಂ ಮುರಾಂತಕಂ ಕಂಡು
ವಿದ್ರಾವಣಂಗೆ ತೋಱಿದೊಡೆ—

ಕಂ || ನರನೆಚ್ಚೊಡೆ ಪಱಿದು ಕರಂ |
ಕರವಾಳೊಡನಮರೆ ಕಾಸಿ ಬೆಚ್ಚಂತೆ ವಸುಂ ||
ಧರೆಯೊಳ್ ಬಿಟ್ಟಿರ್ದುದದೇಂ |
ತಿರವೋ ಪ್ರೂಣಿಸಿದ ಮುಷ್ಟಿ ಭೂರಿಶ್ರವನಾ ||

ವ|| ಆಗಳ್ ಸಾತ್ಯಕಿ ಮುಳಿಸಿನೊಳ್ ಕಣ್ಗಾಣದೆ ಭೂ
ತಲೆಯನರಿದು ತನ್ನೇಱಂಗೆ ತಾನೆ ಸಿಗ್ಗಾಗಿ ಪೋದನನ್ನೆಗಂ ಯ
ನನ ಬೆಸಮೊಳ್ ಫಲ್ಗುಣನಂ ಕೆಯ್ಕೊಳಲ್ ಬರ್ಪ ಮರುಸ್ನಂ
ದ್ರೋಣರಡ್ಡಂಬಂದೊಡೆ ಗುರುಗೆ ಗುರುದಕ್ಷಿಣೆಗುಡುವಂತವರ
ಶತ ಚೂರ್ಣಂ ಮಾಡಿ ಕಳಿಂಗರಾಜ ಗಜ ಘಟೆಗಳನೌಂಕಿ ಸೋ
ಬರೆ ದುಶ್ಶಾಸನಾದಿಗಳದಿರದಿದಿರಂ ಬಂದಾಂತೊಡೆ—

ಚಂ|| ನಿಡುವಗೆ ಸೈಪಿನಿಂದೆ ದೊರೆಕೊಂಡುದಿವರ್ ಗಜೆಗೊಂಡೆನ
ಗಡೆ ಪರೆದಪ್ಪುರೆಚ್ಚು ತವೆ ಕೊಲ್ವೆನಿವಂದಿರನೆಂದು ನಚ್ಚಿನ
ಚ್ಚುಡಿವಿನಮೆಚ್ಚೊಡೆಚ್ಚೆಡೆಯಿನೆಚ್ಚರುಣಾಂಬು ಕಲಂಕಿ
ನ್ನಡಿಯೊಳುರುಳ್ದರಂಥನೃಪನಂದನರಂದು ಮರುತ್ತನೂಜ
||

ವ || ಅಂತು ದುರ್ಮುಖ ದುರ್ಮದ ದುರ್ಧರ್ಷಣರ್ ಮೊ
ಮೂವತ್ತು ಮೂವರಂ ಕೊಂದು ದುಶ್ಶಾಸನನಂ ವಿರಥನಂ
ದುರ್ಯೋಧನನನೊಂದೆ ನಿಶಿತ ವಿಶಿಖ ಹತಿಯಿಂ ಸುರುಳ್ದುರುಳ್ವಿ
ಮೂರ್ಛಾಗತನಂ ಮಾಡಿ ಸಿಂಹನಾದದಿನಾರ್ದು ಮುಟ್ಟಿವರ್ಪಾ
ಸಾವಂ ನೋಡಲಾಱದೆ—

|| ಎಡೆ[1]ಗೊಂಡಂಕದ ಕರ್ಣನೆಯ್ದುವರೆ ದಿವ್ಯಾಸ್ತ್ರಂಗಳಿಂದಂ ಸಿಡಿಲ್‌।
ಪೊಡೆವಂತಪ್ಪಿನಮೆಚ್ಚುದಗ್ರ ರಥಮಂ ಮುಯ್ಯೇಱು ಸೂಟ್‌ ಕೋಪದಿಂ ||
ಕಡಿಯಲ್ ಸಾರ್ದೊಡಬಿಲ್ದು ಸೂತ ಸುತನೊಂದುಗ್ರೇಷುವಿಂ ತಿಣ್ಣಮೆ ।
ಚ್ಚೊಡನಾರ್ದಂ ನಸು ಮೂರ್ಛೆವೋಗಿ ರಥದೊಳ್ ಭೀಮಂ ನರಲ್ವನ್ನೆಗಂ || ೧೪೩ ||

ವ || ಅಂತು ಮೂರ್ಛಾಗತನಾದ ಭೀಮನ ಕೊರಲೊಳ್ ಬಿಲ್ಲಂ
ಿದು ಮೇಗಿಲ್ಲದೆ ತೆಗೆದು—

ಕಂ || ತಾಂ ಗಡಮೆನ್ನಾಳ್ದನ ತೊಡೆ ।
ಯಂ ಗಡಮಿನ್ನುಡಿವನೆನ್ನೊಳಂ ಕಾದುವನೆಂ ||
ದಂಗಪತಿ ನುಡಿದು ಕೊಲ್ಲದೆ ।
[2]ತಾಂಗಿದನಂಬಿಕೆಗೆ ನುಡಿದ ನುಡಿ ನಿಲೆ ಮನದೊಳ್ || ೧೪೪ ||

ವ || ಅನ್ನೆಗಮಿತ್ತ ಚಾಣೂರಾರಿ ಜರಾಸಂಧಾರಿಯ ಮುನ್ನೆಗೆದು
ಕ್ಕುಡಂಗಿದ ಸಿಂಹನಾದಕ್ಕೆ ಮನಃಕ್ಷತಂಬಟ್ಟು ಸಾತ್ಯಕಿಯನಾರಯ
ದೊಡಾತಂ ಬಂದಚೇತನನಾಗಿ ಬಿಟ್ಟಿರ್ದ ವೃಕೋದರನಂ ತನ್ನ
ುನೇಱಿಸಿಕೊಂಡುಕೂಡೆ ವಂದನನ್ನೆಗಂ ದುರ್ಯೋಧನಂ ಕರ್ಣಂ
ು ಸೈಂಧವನ ಮೊನೆಯೊಳಾತನಂ ಪೆಱಗಿಕ್ಕಿ ಮುಂದೆ ನಿಂದಾಗಳ್

|| ದಿನಕರನಸ್ತ ಮಸ್ತಕಮನಾಸೆವಡಲ್ ಬಗೆದಪ್ಪನೇಕೆ ಕೆ ।
ಮ್ಮನೆ ತಡೆವೈ ಜಯದ್ರಥನನಿಕ್ಕುಱಿದಾರೊಳಮಿಂ ತೊಡಂಕವೇ||
ಡೆನುತಮಜಂ ಮರುಜ್ಜವದೆ ಚೋದಿಸೆ ಪಾರ್ಥನ ದೇವದತ್ತ ನಿ ।
ಸ್ವನದೊಳೆ ತೀವಿ ಪೊಟ್ಟ[3]ನೊಡೆವಂತೆವೊಲಾದುದಜಾಂಡ ಮಂಡಳಂ || ೧೪೫ ||

1 ಗೋದಂ (ಖ. ಘ.). 2 ಪಿಂ (ಕ.). 3 ಗೊ (ಖ. ಘ.).

ಚಂ || ಚಟುಳಿತ ಚಕ್ರನೇಮಿ ಪರಿವರ್ತನ ಘಟ್ಟನ ಘಾತ ನಿರ್ಭರ
ಸ್ಫುಟಿತ ಧರಾತಳಂ ವಿಜಯನುಗ್ರ ರಥಂ ಪರಿದತ್ತು ದಲ್
ಘಟಿತ ಹಟದ್ವಿರೋಧಿ ರುಧಿರಪ್ಲವ ಲಂಪಟ ಸಂಕಟೋತ್ಕ
ಕಟಕಟ [1]ಘಾತ ನಾಕ ತಟ ಸಂಕಟ ಸಂಗರ ರಂಗ ಭೂಮಿ
||

ವ || ಆಗಳ್ ಕುರುಧ್ವಜಿನಿಗೆ ಭಯಜ್ವರಮುಂ ಮಹೇಶ್ವ
ಮುಂ ಬರೆ ಬರ್ಪುದಾರ ಮಹೇಶ್ವರನ ರಥದ ಬರವಂ ಕಂಡು ಕಣ
ಶಕುನಿ ಶಾರದ್ವತ ಕೃತವರ್ಮ ದುರ್ಯೋಧನ ದುಶ್ಶಾಸನರ್ ಮೊ
ದತಿರಥ ಸಮರಥ ಮಹಾರಥಾರ್ಧರಥರೊಂ[2]ದೆ ವಿಂದೆಯಲ್ಲದೊಂ
ರೊಳ್ ಸಂಧಿಸಿ ಗೊಂದಣಿಸಿ ನಿಂದಾಗಳ್—

ಚಂ || [3]ಶರದೊಳಗುರ್ಚಿ ಪೋಪ ಪೊಳಪಿಂಗೊಳಗಾಗಿ ತಗುಳ್ಪು ದೊ

ಳ್ಸರಿಗೆಣೆಯಾದುದೀಯೆಱಗುವಂಬಿನ ಬಲ್ಸರಿಯೆಂಬಿನಂ [4]
ತಲದೊಳೆ ಪಾಯ್ದು ಕೂರ್ಗಣೆಗಳಂ ತಱಿದೊಟ್ಟೆ ತೆರಳ್ಚಿ
ತೂಳ್ದಿ
ಡರೆದು ಮುಗುಳ್ಚಿ ಸಣ್ಣಿಸಿದನಾಂತ ಚತುರ್ಬಲಮುಂ
ಗುಣಾರ್ಣವಂ ||

ಮ|| ಸ್ರ|| ಕಲಿಗಂ ಬಲ್ಲಾಳ್ಗಮಂಜೆತ್ತಿದೆನಿದುವೆ ಪದಂ ಮಾಕೊ
ಸಿಂಧು ರ
ಗೆಲಲೆಂದಾಂ ಬಂದೆನಿಂ ಕೊಂದ[5]ಪನೆ ನೆರೆದು ನಿಂದಾನಿಮೊಂದ

1 ಪೂತನಾ ಕಟಕ (ಕ.). ಘಾತನಾ ಟಕ (ಖ.), ಘಾತನಾ ಕಟಕ (ಗ
(ಗ. ಘ.). 3 ಸ. (ಗ. ಘ.). 4 ತ (ಖ. ಗ. ಘ.). 5 ಪೆ (ಖ. ಘ

ದಲಿಸುತ್ತಿರ್ಚ್ಚಂ ಪ್ರಚಂಡ ಪ್ರಳಯ ಘನ ಘಟಾರಾವದಿಂದಾರ್ದು ಬಾಣಾ ।
ವಲಿಯಿಂದಂ ಪೂಱೆ ರೋದೋ ವಿವರಮನೊದವಿತ್ತೊಂದು ಘೋರಾಂಧಕಾರಂ ॥ ೧೪೮ ॥

ವ ॥ ಅಂತವೋಘಾಸ್ತ್ರ ಧನಂಜಯನೆಚ್ಚ ಶರ ಸಂಘಾತದಿನೊಗೆದ ಗಟ್ಟಿಲೆಯೆ ಮೊಲಗಟ್ಟಿಲೆಯಂ ಮಾಡೆ ನೇಸಱ್ ಪಟ್ಟತ್ತು ವಿಜಯಂ ೀಲ್ತನೆಂದು ಕೌರವ ಬಲಮಾರ್ದೊಡೆ—

॥ ಜ್ವಳದನಳಾಸ್ತ್ರದಿಂದಮಿಸೆ ಕಟ್ಟಿಲೆ ತೂಳ್ದು ತೆರಳ್ದುದಾಗಳು ।
ಮ್ಮಳಿಸಿ ಮಹಾರಥರ್ ಪೆಳಱೆ ಸೈಂಧವನೆನ್ನಳವಿಂಗಮೆನ್ನ ದೋ॥
ರ್ವಳದಳವಿಂಗಮಿಂ ಸೆಡೆದಿರಲ್ ದೊರೆಯಲ್ತೆನಗೆಂದು ಬಂದಸುಂ।
ಗೊಳೆ ಪೊಣರ್ದಂ ಸುರರ್ ಪೊಗೞೆ ತನ್ನಳವಂ ಜಗದೇಕಮಲ್ಲ ನೊಳ್ ॥ ೧೪೯ ॥

ವ ॥ ಅಂತತಿರಥ ಮಥನನ ರಥಕ್ಕದಿರದಿದಿರಂ ತನ್ನ ರಥಮುಂ ಯಿಸಿ ಜಯದ್ರಥಂ ಮುಟ್ಟೆವಂದು—

॥ ನಿನ್ನೆ ಪೊರಳ್ಚಿ ನಿನ್ನ ಮಗನಂ ಸೆರಗಿಲ್ಲದೆ ಕೊಂದೆನಿಂದು ಮಿಂ ।
ತಿನ್ನೆಗಮಿರ್ಪುದಂ ಭಯದಿನಿರ್ದೆನೆ ನಿನ್ನನೆ ಪಾರುತಿರ್ದೆನೆಂ ॥
ದುನ್ನತ ಶೌರ್ಯದಿಂದಜಿತನಂ ನರನಂ ಮುನಿದೆಚ್ಚನೇೞುಮೆಂ ।
ಟುನ್ನಿಶಿತಾಸ್ತ್ರದಿಂದದಟದೇಂ ದೊರೆವೆತ್ತುದೊ ಸಿಂಧು ರಾಜನಾ ॥ ೧೫೦ ॥

ವ॥ ಅಂತೆಚ್ಚು ಕಿಚ್ಚುಂ ಕಿಡಿಯುಮಾಗಿ ಪೆರ್ಚಿದುಮ್ಮಚ್ಚರದಿಂದ ಯಾಗೆ ಕಾದೆ—

ಎಂತಸ್ಮತ್ಪುತ್ರನಂ ಸಂಗರದೊಳಱಿದೆಯಿನ್ನಂತೆ ನಿಲ್ ಶಕ್ತಿ ಚಾತು।
ರ್ದಂತಂಗಳ್ ನಿನ್ನನಾಂ ಕೊಲ್ವೆಡೆಯೊಳೆಲವೊ ಪೇೞ್ ಕಾವುವೇ ಕಾಯವಣ್ಮೆಂ ॥

ದಂತಾಂತೆಜ್ಜೆಚ್ಚ ಸೂತ ಧ್ವಜ ಹಯ ರಥ ಸಂಘಾತಮಂ
ಲೊ
ಕ್ಕಂತಂ ಮಾಱ್ಪಂತಕಂಬೋಲ್ ಗದೆವಿಡಿದುಱದೆಯ್ತರ್ಪ
ಕಂಡನಂತಂ ॥ ೧

ಕಂ ॥ ತುಡು ಪಾಶುಪತಮನೆನೆ ನರ ।
ನೆಡೆಮಡಗದೆ ತುಡೆ ದಿಶಾಳಿ ನಡುಗಿದುದು ಸುರು ॥
ಳ್ದಡುಗಿದುದು ವಿಯತ್ತಳಮೆಳೆ ।
ಪಿಡುಗಿದುದು ಕಲಂಕಿ ಕದಡಿದುದು ಶಿವನ ಮನಂ ।
॥ ೧

ಚಂ ॥ ಸುೞಯೊಳಗಿರ್ದು ಬೆಟ್ಟು ಪೊಱಪೊಣ್ಮುವಿನಂ ಲವಣಾಂಬ

ಕ್ಕುಟಿಗುದಿವಲ್ಲಿ ಕೂಟ್ಟುದಿಯೆ ಮೇಗೆ ಸಿಡಿಲ್ದಗುಳಂತೆ ಕೂ
ತ್ತುಟಿಗುದಿಯುತ್ತುಮಿರ್ಪ ಕುದಿಯೊಳ್ ಸಿಡಿದಲ್ಲಿಯ ಮುತ್ತ
ಛಟ
ಛಟಿಲೆನೆ ಕೊಂಡುಪೊರ್ವೊದಲೆ ರುದ್ರ ಸುರೇಂದ್ರ ವಿಮಾ
ಪಙ್ಕ್ತಿಯಂ ॥ ೧

ವ॥ ಅಂತು ಸಮುದ್ರ ಕ್ಷೋಭಮುಂ ತ್ರೈಲೋಕ್ಯ ಕ್ಷೋ
ಮೊಡನೊಡನಾಗೆ—

ಚಂ ॥ ತೆಗೆನೆಱೆದೂಱೆಕೊಂಡಿಸೆ ಶಿರಂ ಪರಿಪತ್ತ ವಿಯತ್ತಳಂಬರಂ
ನೆಗೆದೊಡೆ ರಾಹು ಬಾಯ್ದೆಱೆದು ನುಂಗಲೆ ಬಂದಪುದೆಂಬ
ಶಂಕೆ
ದಗಿದು ದಿನೇಶನಸ್ತ ಗಿರಿಯಂ ಮಱೆಗೊಂಡನಮೋಘಮೆಂಬ
ತುಗಳ ನೆಗಟ್ತೆಯಂ ಪಡೆದನಾಹವದೊಳ್ ಪರಸೈನ್ಯಭೈರ
॥ ೧

ಬಿರಿದಲರ್ಗೋಳಿ ಸಗ್ಗದ ಮದಾಳಿಗಳಂ ಗೆಡೆಗೊಂಡು ದೇವ ಸುಂ ।
ದರಿಯರ ಕೆಯ್ಗಳಿಂದಮುಗೆ ತುಂಬುರು ನಾರದರೊಂದು
ಗೇಯದಿಂ ॥
ಚರಮೆರ್ಪೆಯಂ ಪಳಂಚಲೆಯೆ ವೀರ ಲತಾಂಗಿಯ [1]ಸೋಂಕು
ಮೆಯ್ಯೊಳಂ ।
ಕುರಿಸೆ ನಿರಾಕುಳಂ ಕಳೆದನಾಜಿ ಪರಿಶ್ರಮಮಂ ಗುಣಾರ್ಣವಂ.
॥ ೧೫೫ ॥

ವಿವಿಧ ವಿಬುಧ ಜನವಿನುತ ಜಿನಪದಾಂಭೋಜ ವರಪ್ರಸಾದೋತ್ಪನ್ನ ಪ್ರಸನ್ನ, ಗಂಭೀರ ವಚನ ರಚನ ಚತುರ ಕವಿತಾ ಗುಣಾರ್ಣವ ವಿರಚಿತಮಪ್ಪ ವಿಕ್ರಮಾರ್ಜುನ ವಿಜಯದೊಳ್ ಏಕಾದಶಾಶ್ವಾಸಂ.

೭, ೨, ೬೨.

———

1 ಸೋಂಕು ಸೊಂಪನಂ (ಕ.). ಸೊಂಪು ಸೊಂಕಿನಂ (ಖ.), ಸೊಂ. . .(ಗ.).

# ದ್ವಾದಶಾಶ್ವಾಸಂ

ಕಂ || ಶ್ರೀ ಕಾಂತಾ ಕಾಂತನಿಳಾ |
ಲೋಕೈಕ ಲಲಾಮನಾ ಮಹೋಗ್ರಾರಿ ನೃಪಾ ||
ನೀಕಮನನೇಕಮಂ ಗೆ |
ಲ್ದಾ ಕಲಹದೊಳರಿಗನುಱದೆ ನಿಲ್ವುದುಮಾಗಳ್ ||

ನಂಬಿ ನೃಪನೆನಗೆ ಸೈಂಧವ |
ನಂ ಬಂದಪ್ಪೈಸೆ ಪೂಣ್ದೆನಾದುವನಾಗ ||
ಲ್ಕಿಂಬಱಿದನುವರದೊಳವಂ |
ಮುಂಬಯಣಂಬೋದನೆನಗೆ ಮಾಣ್ಬುದು ದೊರೆಯೇ ||

ಬವರದೊಳೇಂ ಬಲ್ಲಂ [1]ಕರ |
ಮೊವಜು ಗೆಯಲ್ ಪೆಱರ್ಗೆ [2][ಕಂಡು] ತನಗಱಿಯನ
ತುವ್ರೊ ನುಡಿ ತಪ್ಪದು ಕಮ್ಮಱಿ |
ಯೊವಜಂ ಬಿಲ್ಲೊವಜನೆಂಬುದಂ ಮಾಡು[3]ವೆನೇ ||

ಒಪ್ಪೆ ಜಯದ್ರಥನಾದುದ |
ನಪ್ಪಂ ಪೋಗೆಂದು ಮುನ್ನೆ ನುಡಿದುದನೀಗಳ್ ||
ತಪ್ಪುವೆನೆ ಧರೆಯೊಳೆಂತುಂ |
ತಪ್ಪದು ವಲಮೆನ್ನ ನುಡಿಯುಮೆನ್ನೆಚ್ಚಂಬುಂ ||

ವ|| ಎಂದು ಕುಂಭಸಂಭವಂ ಜಳನಿಧಿಯಂ ಕುಡಿದ ಕುಂಭಸ
ನೆಂತೆ ಪಾಂಡವ ಬಳ ಜಳನಿಧಿಯನಳುರಲ್ ಬಗೆದು ನೇಸಱ್ ಪಟ್ಟೊ
ಪೋಗದೆ ಪಗಲಿನನುವರದೊಳಳ್ಳೆವಿಳ್ಳೆಯಾದ ಪಾಂಡವರನಿರು
ಗೆಲ್ವೆನೆಂದು ಚತುರ್ಬಲಂಗಳನೊಂದುಮಾಡಿ—

---

1 ಪೆಱರ್ಗ (ಘ§.). 2 ಗಂಡ (ಕ.) ಡ. (ಕ. ಗ. ಘ.), ಕರಮು (
3 ವ (ಕ. ಖ. ಗ.).

ಉ ॥ ತಕ್ಕಿನ ವಿಕ್ರಮಾರ್ಜುನನ ಕೋಪದ ದಳ್ಳುರಿಗಳ್ ವಿರೋಧಿಯಂ।
ಮುಕ್ಕಲೆ ಮುತ್ತಿದಂತೆ ಕರಿಗೆಂಟು [1]ರಥ[ಕ್ಕನುವಾಗೆ]ನಾಲ್ಕು ವಾ॥
ಹಕ್ಕೆರಡಲ್ಲಿ ಪಾಪಚರರ್ಗೊಂದೆನೆ ದೀವಿಗೆಗಳ್ ಜಲಕ್ಕನೆ।
ಕ್ಕೆಕ್ಕೆಯಿನಿಟ್ಟಳಂ ಬೆಳಗುತಿರ್ದುವೆರಟ್ಟಿಸೆಯೊಡ್ಡಣಂಗಳೊಳ್
॥ ೫ ॥

ವ॥ ಅಂತು ಪಗಲಿಱಿದು ತಣಿಯದಿರುಳಂ ಪಗಲ್ಮಾಡಿ ಕಾದು ವೆರಟ್ಟಿಡೆಗಳೇರ್ವೆಸನಂ ಕಣ್ಣಾರೆ ನೋಡಲೆಂದು ವೈಮಾನಿಕ ದೇವರಂಬರತಳದೊಳಿರ್ದು ಕಿರ್ಚೆಟ್ಟಿ ಲಂಕೆಯಂ ನೋೞ್ಪಂತೆ ನೋಡೆ ಧರ್ಮಪುತ್ರನನಧೋಕ್ಷಜನಿಂತೆಂದಂ—

ಚಂ॥ ಇರುಳೊಳಮಿಂತು ಪೋಗದಿಱಿಯಲ್ ಘಟಸಂಭವನಿ[2]ರ್ದನೆಂತು ನಿ।
ತ್ತರಿಸುವಮೀ ಮಹಾಹವಮನೆಂಬುದುಮಿನ್ನಿರುಳೊಳ್ ಬಲಂ ನಿಶಾ।
ಚರ ಬಲಕುಂಟು ಮಾಣದೆ ಘಟೋತ್ಕಚನಂ ಬೆಸವೇೞ್ಪುದೆಂದೊಡಾ।
ದರದೊಳೆ ಭೀಮನಂದನನನಾ ಪದದೊಳ್ ಯಮರಾಜ ನಂದನಂ
॥ ೬ ॥

ವ॥ ಕರೆದು ಮಗನೆ ನೀನಿಂದಿನಿರುಳಿನನುವರಮನೆನಗೆ ಗೆಲ್ದೀಯಲ್ವೇೞ್ಕುಮೆಂದೊಡಿದಾವುದರಿದುಂ ಪಿರಿದುಮಾಗಿ ಬೆಸಸಿದಿರಂತೆಗೆಯ್ವೆನೆನ್ನ ತೊೞ್ತುವೆಸನ ನೀವಿಶಸನ ರಂಗದೊಳ್ ತೋರ್ಪೆನೆಂದು—

ಚಂ॥ ಪರೆದುರಿಗೇಸಮುಪ್ಪಳಿಪ ನಾಲಗೆ ಮಿಂಚುವ ದಾಡೆ ಬಿಟ್ಟ ಕಣ್।
ತಿರುಪಿದ ಮೀಸೆ ಕೊಂಕಿದ ಸಟಂ ಕಱು[3][ದ]ಪ್ಪಕಂದಪು [4][ನೀ]
ಟ್ಟ [5]ತಾ।

---

1 ರಥಕ್ಕೆ . . . ನೆ ನಾಲ್ಕು (ಕ. ಖ), . . . ರಥಕ್ಕೆ ನಾಲ್ಕು (ಗ. ಘ.) 2 ರ್ಪ್ಪ (ಕ.). 3 ನೆಕ್ಕ ಪದಂ (ಕ.), ನೆಕ್ಕ ಕದಂಪು (ಖ. ಗ. ಘ.), ನಪ್ಪಕದಂಪು (ಘ§.)· 4 ಪೊದ (ಸ.). 5 ಕ| ರ್ಮ್ಮ (ಕ.), ಕಾ | ಳ್ಮ (ಗ.).

ಟ್ಕ್ರದವೊಲಪ್ಪೊಡಲ್ ಕಹ ಕಹ ಧ್ವನಿ ಕೌಳಿಕ ನಾದಮಾದಮಾ
ಸುರುತರಮಾಗೆ ಬಂದು ಕವಿದತ್ತು ಘಟೋತ್ಕಚ ರೌದ್ರ ಸಾಧನ
|| ೭

ವ|| ಅಂತು ನಿಶಾಚರ ಬಲಮುಜಿವಜಿಗಾದ ಕಾಡನಳುರ್ವ ಬೇಗೆಯ
ದಳ್ಳುರಿಯಂತೆ ದಳ್ಳಿಸಿ ಕೊಳ್ಳೆಂದರಾತಿ ಬಲಮನಳುರೆ ಕರಡಿಂ
ತೊವಲೊಳ್ ಪುದಿದ ಕರ್ಬೊನ್ನ ರಥಮುಮಾ ರಥದೊಳೊಡಂಬ
ಪೂಡಿದ ನಾಲ್ನೂಜು ಗೊಂಕುಜುಗಟ್ಟೆಯುಮಂಬರಸ್ಥಲಮನಡವ
ಗೃಧ್ರಧ್ವಜಮುಮಂಜನ ಪುಂಜದಂತಾಗಿ ಬ್ರಹ್ಮಾಂಡಮಂ ತಾಗಿ
ವಿಕಟಾಂಗಮುಮೆಳವೆಜೆಯನಡಸಿದಂತಪ್ಪ ದಾಡೆಯುಮಗುರ್ವಾ
ಬಂದು ತಾಗಿದಾಗಳ್—

ಚಂ|| ಕುದುರೆಯ ಬಿಲ್ಲ ಬಲ್ಲಣಿಯ ಕೇಣಿಯನಲ್ಲಿ ಕೆಲರ್ ನಿಶಾಟರು |
ಣ್ಮಿದ ಬಿಸು ನೆತ್ತರೊಳ್ ಮಿದಿದು ನುಣ್ಣನೆ ನುಂಗಿದರೆಲ್ಲಿಯು
ಕೆಲರ್
ಕುದುಗುಳಿ ರಕ್ಕಸರ್ ಬಿಸುಗೆಗಳ್ಪಿರಸುಗ್ರ [1]ಮಹಾ ಗಜಂಗಳಂ |
ಚದುರ್ಗಿಡೆ ನುಂಗಿ ಬಿಕ್ಕಿ ಕುಡಿದರ್ ಬಿಸು ನೆತ್ತರ ಕಾಪ್ಪುರಂಗಳ
|| ೮

ವ|| ಅಂತು ರಕ್ಕಸವಡೆ ತನ್ನ ಪಡೆಯೆಲ್ಲಮಂ ತೆರಳ್ಚಿ ತೇರಯಿ
ನುಂಗಿಪೊಡೆ ಬೆಜಿಗಾದ ಸುಯೋಧನನಂ ಬಕಾಸುರ ಜಟಾಸುರ
ಮಕ್ಕಳಪ್ಪಳಂಭೂಷ ಹಲಾಯುಧ ಮುಸಲಾಯುಧ ಕಾಳನೀಳದೂ
ರಾಕ್ಷಸರ್ ಮುನ್ನೆ ತಮ್ಮಣ್ಣನ ತಂದೆಯ ಪಗೆಯಂ ನೆಜಪಲೆಂದು ಬೆಸನ
ಬೇಡಿದಾಗಳ್—

ಚಂ|| ಪ್ರತಿ ವಿಷಮುಗ್ನಿಗಗ್ನಿ ವಿಷಕಂ ವಿಷಮೆಂಬವೊಲಾ ನಿಶಾಚರಂ |
ಗತಿ ಬಲರೀ ನಿಶಾಟ[2][ರಿವ]ರಕ್ಕೆನುತುಂ ಬೆಸವೇಜಿ ತಾಗಿದಾ ||

1 ಗಂಜಗಳಂ ಜೆಲುಂ | ಗದೆ ಜಿಡೆ (ಕ.). 2 ಸಮ (ಸ.).

ದಿತಿಸುತರಂ ಘಟೋತ್ಕಚನಸುಂಗೊಳೆ ಕಾದಿ ನಿಶಾಟ ಕೋಟಿ ಸಂ।
ತತಿಗಳನಿಕ್ಕಿ ಪಾಂಡವ ಬಲಕ್ಕನುರಾಗಮನುಂಟುಮಾಡಿದಂ
॥ ೯ ॥

ವ॥ ಅಂತು ಕುರುಬಲಮೆಲ್ಲಮಂ ಜೀರಗೆಯೊಕ್ಕಲ್ಮಾಡಿ[1] ತುಱಿದು ಕೊಲೆ ರಾಜ ರಾಜನ ಬೆಸದೊಳಂಗರಾಜಂ ಬಂದು ತಾಗೆ—

ಮ ॥ ಸಮದೇಭೇಂದ್ರ ಸಮೂಹದಿಂದಮಿಡುತುಂ ಕಂಠೀರವಧ್ವಾನದಿಂ ।
ದಮುಗುರ್ವಪ್ಪಿನಮಾರುತುಂ ಪೆಣಗಳಂ ನುಂಗುತ್ತುಮಾಕಾಶದಂ ॥
ತಮನೆಯುತ್ತುಮಿದಿರ್ಚಿ ಕಾದುವೆಡೆಯೊಳ್ ಕಾಣುತ್ತೆ ದೇವರ್ಕಳಿ।
ನ್ನಿವೊಳಂ ರಾವಣನೆಂಬಿನಂ ನೆಗಟ್ದುದಾ ಹೈಡಿಂಬನಾಡಂಬರಂ
॥ ೧೦ ॥

ಕಂ ॥ ಸರಿದಧಿಪತಿ ಮೊಟಿಕಾಲ್ವರ ।
ಮುರಂಬರಂ ಮೇರು ಮುಯ್ವುವರೆಗಮಜಾಂಡಂ ॥
ಬರೆ ತಲೆಯ ನೆಲೆಗೆ ಲೋಕಾಂ ।
ತರ ಮೆಡೆಯಿಲ್ಲೆನಿಸೆ ಪೆರ್ಚಿದಂ [2]ದನು ತನಯಂ ॥ ೧೧ ॥

ಬೆಳ್ವಾಳ್ಗೆ ಪೊಳೆವುದೋಱುವು ।
ದೊಳ್ವಾಳ್ಗೆ ಪೊಡರ್ಪುದೋರ್ಪುದಿರದಣ್ಮಣ್ಮಂ ॥
ದೊಳ್ಪಲಗಿನ ಶರ ತತಿ[3]ಯಿಂ ।
ಕೊಳ್ಪ ಕೊಳೆಂದಂಗರಾಜನಸುರನನೆಚ್ಚಂ ॥ ೧೨

ಉತ್ಸಾಹ ॥ ಎಚ್ಚೊಡಸುರನಿಟ್ಟ ಬೆಟ್ಟನೊಂದು ವಜ್ರ ಶರದಿನಾ ।
ದೆಚ್ಚು ದಿತಿಜನೆಚ್ಚ ಸಿಡಿಲ ಶರಮನುದಕ ಬಾಣದಿಂ ॥
ದೆಚ್ಚು ದನು ತನೂಜನೆಚ್ಚ ವಾರ್ಧಿಗನಲ ಬಾಣದಿಂ ।
ದೆಚ್ಚು ನಚ್ಚುಗಿಡಿಸೆ ಕೊಂಡು ಶೂಲಮಂ ಘಟೋತ್ಕಚಂ ॥ ೧೩ ॥

1 ಪಱಿ (ಕ. ಖ.). 2 ರವಿ (ಕ.), ನಿಜ (ಖ.), ತನು (ಗ.) 3 ಯಂ (ಕ.).

ಕಂ || ನೆಲನದಿರ್ವಿನಮಿದಿರಂ ಬರೆ |
ಕುಲಿಶಾಯುಧನಿತ್ತ ಶಕ್ತಿಯಿಂದಾತನುರ ||
ಸ್ಥಲಮನಿಡೆ ವಜ್ರ ಹತಿಯಿಂ |
ಕುಲಗಿರಿ ಕೆಡೆವಂತೆ ಕೆಡೆದನಾ ದನುತನಯಂ || ೧

ಒಂದಕ್ಷೋಹಿಣಿ ನುರ್ಗಿದು |
ದಿಂದಿವನ ಕಬಂಧ ಘಾತದಿಂ ಸತ್ತಿನಿತಂ ||
ಕೊಂದನಿವನಿವನನಳ್ಕುಱೆ |
ಕೊಂದಳವಿನತನಯನಲ್ಲವಂಗೊಪ್ಪುಗುಮೇ || ೧

ವ || ಎಂದೆರಡುಂ ಪಡೆಗಳುಂ ದೇವರ ಪಡೆಗಳುಂ ಕರ್ಣನನೆ ಪೊಗ
ಕಾದಲ್ಕೇಡೆಂಬಂತುಭಯ ಸೈನ್ಯಂಗಳ್ಗಡ್ಡಮಾಗಿ ಕುಲಗಿರಿ ಕೆಡೆವಂತಯ
ವುದು ನೆಲ[1]ನೋಡಲಳವಿಯಾಗೆ ಬಿಟ್ಟಿರ್ದ ಘಟೋತ್ಕಚನ ಸಾ
ಕರಮು ಬಿಲ್ದು ಕಣ್ಣ ನೀರಂ ಸಿಡಿವಂತಕಾತ್ಮಜನನನಂತನಿಂತೆಂದಂ—

ಮ || ದಿವಿಜಾಧೀಶನ ಕೊಟ್ಟ ಶಕ್ತಿಯನದಂ ಕರ್ಣಂ ನರಂಗೆಂದು ಬ
ಯ್ತಿವನಿಂದಿಂದಱಿವೆಯ್ದೆ ವಂದೊಡದಱಿಂದಿಂದಾತನಂ ಕೊಂದನಿ
ನ್ನಿವನಂ ಕೊಲ್ವುದು ಮೊಗ್ಗದರ್ಕಱಲವೇಡೆಂಬನ್ನಮತ್ತೇಱಿದಂ
ರವಿ ಪೂರ್ವಾಚಲಮಂ ನಿಜಾತ್ಮಜನಗೆಲ್ದಗ್ರಾಜಿಯಂನೋಟ್ಪ
ವೋಲ್ || ೧

ವ || ಆಗಳ್ ಕುಂಭಸಂಭವಂ ಶೋಣಾಶ್ವಂಗಳೊಳ್ ಪೂ
ಕನಕ ಕಳಶಧ್ವಜ ವಿರಾಜಿತಮಪ್ಪ ತನ್ನ ರಥಮನೇಱಿ ಘಟೋತ್ಕ
ಕಳೇಬರ [2]ಗಿರಿ ದುರ್ಗಮಲ್ಲದ ಸಮ ಭೂಮಿಯೊಳ್ ಚತುರ್ಬಲ
ನೊಂದುಮಾಡಿ ಶೃಂಗಾಟಕ ವ್ಯೂಹಮನೊಡ್ಡಿ ನಿಂದಾ
ಧೃಷ್ಟದ್ಯುಮ್ನನುಂ ಪಾಂಡವ ಪತಾಕಿನಿಯುಮಂ ವಜ್ರವ್ಯೂಹಮನೊ
ನಿಲೆ ಧರ್ಮಪುತ್ರನುಂ ಸುಯೋಧನನುಮೊಡನೊಡನೆ ಕೆಯ್ವೀಸಿದಾಗಳ್

1 ವಾ (ಕ. ಖ.), ನೂ (ಗ.). 2 ಮಿಱುದುಗ್ರ (ಕ.).

ಸ್ರ॥ ಎಳೆಯುಂ ಬಹ್ಮಾಂಡಮುಂ ತಾಗುವವೊಲುಭಯ ಸೈನ್ಯಾಬ್ಧಿ
ಗಳ್ ತಾಗಿ ಬಿಲ್ ಬಿ।
ೂಳುದಗ್ರಾಶ್ವಂಗಳಶ್ವಂಗಳೊಳಣಿಯಣಿಯೊಳ್ ಸ್ಯಂದನಂ
ಸ್ಯಂದನೌಘಂ ॥
ೆಳೊಳುಗ್ರೇಭಂ ಮದೇಭಂಗಳೊಳಿಱಿಯೆ ತೆರಳ್ತರ್ಪ
ಕೆನ್ನೆತ್ತ[1]ರಿಂದೋ।
ಳಿಯಂ ಖಂಡಂಗಳೊಂದಿಂಡೆಯೊಳೆ ಜವನಡುತರ್ಗಡಿದಂತಾದು
ದಾಗಳ್॥ ೧೭ ॥

ವ ॥ ಅಂತು ವೀರ ರಸದ ತೊಱೆಯುಂ ನೆತ್ತರ ತೊಱೆಯುವೊಡ
ನೆ ಬೆಳ್ಳಂಗೆಡೆದು ಪರಿಯೆ ಚತುರ್ಬಲಂಗಳ್ ಕಾದಿ ಬಸವಱಿದು
ಂಗಿನಿಂದಾಗಳ್ ವಿರಾಟಂ ತನ್ನ ಚತುರ್ಬಲಂಗಳನೊಂದುಮಾಡಿ
ಡು ಪಾಂಡವರ್ ತನ್ನ ಮಾನಸಿಕೆಯಂ ನಚ್ಚಿ ತನ್ನ ಪೊಱಲೊಳ
ಶವಾಸಂ ಮಾಡಿದುದುಮಂ ದಕ್ಷಿಣೋತ್ತರ ಗೋಗ್ರಹಣದೊಳ್
ಾಗಿ ಕಾದಿ ತುಱುವಂ ಮಗುಳ್ಚಿದುದುಮಂ ನೆನೆದು—

ಸ್ರ॥ ಮಗಳಂ ಪಾರ್ಥಾತ್ಮಜಂಗಂತಲೆ ಬಱಿವಱಿಯುಂದಿತ್ತುದಂ
ತನ್ನ ಮಕ್ಕಳ್ ।
ನೆಗೞ್ದ ಸಂಗ್ರಾಮದೊಳ್ ಸತ್ತುದುಮನೆ ಮನದೊಳ್ ತಾಳ್ದಿ
[2]ತಾಪಾಗಳಾ ಜೆ ॥
ಟ್ಟಿಗಸಂ ಕುಂಭೋದ್ಭವಂ ಬಂದದಿರದಿದಿರನಾಂತೊಂದೆ ಕೆಲ್ಲಂಬಿನಿಂ
ಮೆ ।
ಲ್ಲಗೆ ಪಾರ್ದಾರ್ದೆಚ್ಚ[3]ನೇಸಿಂ ತಲೆಪಱಿದು ಸಿಡಿಲ್ದತ್ತ ಬೀೞ್ವನ್ನ
ಮಾಗಳ್ ॥ ೧೮ ॥

ವ ॥ ಅಂತು ವಿರಾಟನನಿಕ್ಕಿ ಮನದೊಳಳ್ಕಾಟಮಿಲ್ಲದರಿನೃಪ
ಟಿಯ [4]ನಾಟರಲೆಂದಾಸ್ಫೋಟಿಸಿ ನಿಶಿತ ಶರಕೋಟಿಯೊಳ್ ತಳಿ

1 ರಂ (ಖ. ಗ.ಘ,). 2 ಕಾಯ್ಪಾಗಲಾ (ಕ.). 3 ನೆಚ್ಚಿಂ (ಕ. ಖ.), (ಗ.). 4 ನಟ್ಟ (ಘ.).

ಗೋಂಟಿಸುನಿಕ್ಕಿ ವೀರ ರಸ ನಿಕೇನತನಾಗಿರ್ದ ಕಳಶ ಕೇತನನಂ ನೋ
ದ್ರುಪದಂ ಸೈರಿಸದೆ—

ಹರಿಣೀಪ್ಲುತಂ ॥ ಗುರುಗಳೆನಗಂ ಭಾರದ್ವಾಜಂಗಮೊರ್ವರೆ ವಿದ್ದೆಯೊಳ್
ಪುರುಡು ಪಿರಿದುಂಟಿನ್ನುಂ ಬಿಲ್ಬಲ್ಮೆಯೊಳ್ ಮಿ[1]ಗಲೆಯ್ದೆ ಬೇ ॥
ರ್ವರಿದ ಪಗೆಯುಂ ಬನ್ನಂಬಟ್ಟಿನ್ನ ಮುನ್ನಿನ ಬನ್ನಮುಂ।
ಪಿರಿದದೆ ನೆವಂಗೊಂಡಾನಿಂದಿಲ್ಲಿ ನೀಗದೆ ಮಾಣ್ಬೆನೇ ॥ ೧೯

ವ ॥ ಎಂಪೊಂದಕ್ಷೋಹಿಣೀ ಬಲಂಬೆರಸು ಪ್ರಳಯದ ಮಾರಿಯ
ಮಾಕಾಶದ ಕವಿಯುಂ ನೆಲದ ಕಲ್ಲೆಯುಂ ಮುನ್ನಮೆ ಮೇರೆದಪ್ಪುವ
ಮಂ ತನ್ನೊಳಳವಡಿಸಿಕೊಂಡು ತಾಗಿದಾಗಳ್ ಶಲ್ಯನೊಳ್ ಸಾತ್ಯ
ಶಾರದ್ವತನೊಳ್ ಕೃತಾಂತನಂದನಂ ಕೃತವರ್ಮನೊಳ್ ನಕುಳಂ ಶಕು
ಯೊಳ್ ಸಹದೇವಂ ಕರ್ಣನೊಳ್ ಭೀಮಸೇನನಶ್ವತ್ಥಾಮನೊಳಕಳ
ರಾಮಂ ದ್ವಂದ್ವಯುದ್ಧದೊಳ್ ತಾಗಿದಾಗಳ್—

ಮ ॥ ಸ್ರ ॥ ದೆಸೆಯೆಲ್ಲಂ ತೀವ್ರ ಬಾಣಾಳಿಯೊಳೆ ಮೆಡಱಿದಂತಂಬ
ಬಾಣದಿಂದ
ಮುಸುಕಿಟ್ಟಂತಾಗೆ ಬೇಗಂ ತುಡುವ ಬಿಡುವ ಸೂಟ್ಗಿಯ್ಯ
ಬೇಗಂಗಳಂ ನಿ
ಟ್ಟಿಸಲಾರ್ಗಂ ಬಾರದಂತಾಗಸದಳಮಿಸೆ ತದ್ರಾಜ ಚಕ್ರಂ
ಪೊದಟ್ಟ
[2][ಬಿರ್]ಸಿದತ್ತುದ್ದಾಮ ಮೌರ್ವೀ ರವ ಮುಖರ ಮಹಾ ಚಾಪ
ಚಕ್ರಾಂಧಕಾರಂ ॥ ೨೦

ವ ॥ ಅನ್ನೆಗಂ ಕಪ್ಪಂಗ[3]ವಿಯಾಗಿ ಕವಿವ ದ್ರುಪದ ವಿಳಯಾನಳ
ದ್ರೋಣಂ ಮಹಾದ್ರೋಣ ಪುಷ್ಕಳಾವರ್ತಕಂಗಳೆಂಬ ವಿಳಯ ಕಾಳ ನಿ
ಜಳಧರ ವರ್ಷಂಗಳಿಂ ನಂದಿಸೆಯುಂ ನಂದದೆ ಮುಟ್ಟಿವರೆ ದುರ್ಯೋಧ

---

1 ಗಿ (ಕ.). 2 ರ್ಚಿ(ಸ.). 3 ರಿ (.ಘ§.).

ನೇಕಾಯುಧ ಶರ ಭರಿತಂಗಳಪ್ಪ ರಥಂಗಳಂ ದ್ರೋಣಾಚಾರ್ಯರ
ಜಗೆ ನಿಜಾಸಿಯಾಯುಧಾಧ್ಯಕ್ಷರಂ ಪೇ[1]ಟ್ಟು ಚಕ್ರ ರಕ್ಷೆಗೆ ದುಶ್ಯಾಸನಾದಿ
ಳ್ವೆರಸು ತಾನೆ ಬಂದಿರ್ದಾಗಳ್—

ಂ ॥ ದ್ರುಪದ ಬಳಾಂಬುರಾಶಿಯನಗುರ್ವಿ[2]ಸೆ ಪರ್ವಿಪ ಬಾಡ[ಬಾಗ್ನಿ]
ಯಾ।
ಯ್ತು ಪಚಯ[3]ಮಪ್ಪ ಬಿಲ್ಲೊವಜನಂಬಿನ ಬೆಳ್ಸರಿ[4][ಯಾ]ದಮಾ
ರಥ ॥
ದ್ವಿಪ ಘಟೆಯೆಂಬಿವಂಬಿನೊಳೆ ಪೂಟ್ಟು ಪಡಲ್ವಡೆ ತಿಣ್ಣ ಮೆಚ್ಚನಾ।
ತ್ರಿಪುರಮನೆಚ್ಚ ರುದ್ರನ ನೆಗಟ್ತೆಯುಮಂ ಗೆಲೆ ಕುಂಭಸಂಭವಂ
॥ ೨೧ ॥

ವ॥ ಅಂತು ತನ್ನ ಬಲಮೆಲ್ಲಮಂ ಜವನಂತೊಕ್ಕಲಿಕ್ಕೆ ಕೊಲ್ವ ಕಳಶ
ೇತನನಂ ಯಜ್ಞಸೇನನೇನುಂ ಮಾಣದಾತನ ಮೇಲೆ ಬಟ್ಟೆಸಂಬಿನ
ಳ್ಸರಿಯುಮಂ ಕೆಲ್ಲಂಬಿನ ತಂದ[5]ಲುಮಂ[6] ಪಾರೆಯಂಬಿನ ಸೋನೆ
ಯುಮಂ ಸುರಿಯೆ ಕಳಶಯೋನಿ ಮುಳಿದು—

॥ ಪದಿನೆಂಟಂಬಿನೊಳೆಚ್ಚೊಡೆಚ್ಚು ಪದಿನೆಂಟಸ್ತ್ರಂಗಳಿಂ ಸೀಳ್ದು ಕೋ।
ಪದಿನೆಂಬತ್ತು ಸರಂಗಳಿಂ ಗುರು ಭರಂಗೆಯ್ದೆಚ್ಚೊಡೆಂಬತ್ತು ಬಾ ॥
ಣದಿನಾಗಳ್ ಕಡಿದುಗ್ರ ಸೂತ ಹಯ ಸಂಘಾತಂಗಳಂ ತಿಣ್ಣಮೆ॥
ಚ್ಚಿದಿರೊಳ್ ನಿಲ್ಲದಿರೋಡು ಸತ್ತೆಯೆನುತುಂ ಪಾಂಚಾಳ
ರಾ[7]ಜಾಧಿಪಂ ॥ ೨೨ ॥

ವ ॥ ಮೆಯ್ಪೆರ್ಚ್ಚಿ ಪೆರ್ಚಿದುಮ್ಮಚ್ಚರದೊಳಚ್ಚರಿಯಾಗೆಚ್ಚೊಡೆ
[8][ಣ್ಣಾ]ರ್ತು—

1 ಳೆ (ಖ. ಗ. ಘ.). 2 ಸಿ ಪರ್ವಿಸೆ ಪರ್ವಿವಹ್ನಿ (ಖ.). ಸೆ ಪರ್ವಿಸೆವಹ್ನಿ
) ಸಿ . . . . ವಹ್ನಿ (ಗ.), ಸೆ . . . ವಹ್ನಿ (ಘ..), ಪ ಬಾಡಬ ವಹ್ನಿ (ಘ§.).
ದ (ಖ. ಗ. ಘ.). 4 ಯಿಂ (ಸ). 5 ಲೆಯು (ಕ. ಖ.). 6 ಪೊ. (ಕ. ಖ.),
ಜ್ಯಾ (ಕ.). 8 ಣ್ಣು ಕೂರ್ತು (ಕ. ಖ.), ಣ್ಣು ತೂರ್ತು (ಗ.), ಣ್ಣಂರ್ತು (ಘ.)

ಉ || ಎನ್ನೊಳೆ ಮುನ್ನೆ ಮಚ್ಚರಿಪನೇ ಒಡನೋದಿದೆನೆಂಬ ಮೇ
ದೆನ್ನನೆ ಮೆಚ್ಚನೆನ್ನೊಳಮಿವಂ ಸಮನೆಚ್ಚಪನಕ್ಕುಮಾಡೊ
ನಿನ್ನವನಂ ಪಡಲ್ವಡಿಪೆನೆಂದಿರದಾಗಳೆ ಭಾರ್ಗವಾಸ್ತ್ರದಿಂ
ದನ್ನೆಱಿದೆಚ್ಚನಾ ದ್ರುಪದರಾಜ ಶಿರೋಂಬುಜಮಂ ಘಟೋ
||

ವ || ಅಂತು ದ್ರುಪದನೞಿವಂ ಕಂಡಾತನ ತಮ್ಮ
ಶತಾನೀಕ ಶತಚಂದ್ರರ್ ಮೊದಲಾಗೆ ಪನ್ನೊರ್ವರುಮಯ್ವರ್
ಯದುಂ ಕುಂತಿಯ ಮಾವನಪ್ಪ ಕುಂತಿಭೋಜನುಂಬೆರಸು ಪ
ಲ್ಸಾಸಿರ ರಥಂಬೆರಸು ಬಂದು ತಾಗಿದೊಡೆ—

ಮ || ಶಕಟಂಗಳ್ ಪದಿನೆಂಟು ಕೋಟಿವರೆಗಂ ತೀವಿರ್ದನೇಕೋಗ್ರ
ಯಕದಿಂದಂ ಚತುರಂಗ ಸಾಧನದ ಮೆಯ್ಮೆಯ್ಯೊಳ್ ಜಗಿಲ

ಯಕರಂ ಸು[1]ಟಗೆಯಾಱಿಪಂತೆ ರಥದೊಳ್ ಜೋಲ್ವನ್ನೆಗಂ
[2][ಕೋ]ದು
ಪ ಕಳಾ ಕೌಶಳಮಂ ಜಗಕ್ಕೆ ಮೆಱೆದಂ ಮೆಯ್ವೆರ್ಚಿ
ಕುಂಭೋದ್ಭವಂ ||

ವ|| ಅಂತು ದ್ರುಪದ ದ್ರುಪದಾನುಜ ವಿರಾಟ ವಿರಾಟಾ
ಕೈಕಯ ಕುಂತಿಭೋಜಾದಿಗಳಪ್ಪ ನಾಯಕರೆಲ್ಲರುಮಂ ಪೇೞೆ ಪೆ
ದಂತೆ ಕೊಂದು ಮುಂದಾಂಪರಾರುಮಿಲ್ಲದಿಕ್ಕೆ ಗೆಲ್ದ ಮಲ್ಲನಿ
ದಿರ್ಗಳ್—

ಮ|| ಸಕಲಾರಾತಿ ನರೇಂದ್ರ ಮೌಳಿಗಳುರುಳ್ದಾ ದೀಪ್ತ ರತ್ನಾಂಶು
ಳಿಕೆಯಿಂದಾ ರಣರಂಗಮಂ ಬೆಳಗೆ ಕಾಟ್ಟಿರ್ಕೆಂದು
ಭೂತಾಂಗನ

1 ಟಗೆಯೂ (ಕ.), ಟಗೆಯೂ(ಖ). 2 ಕೊಂ (ಸ.).

ನಿಕರಂ ಶೋಣಿತ ವಾರಿಯುಂ ಕುಡಿದಗುರ್ವಪ್ಪನ್ನೆಗಂ ಸೂಸೆ ನೋ|
ಡ ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ
ಕೊಳ್ಗುಳಂ || ೨೫ ||

ವ|| ಆಗಳ್ ಯುಧಿಷ್ಠಿರಂ ನಾರಾಯಣಂ ಪೇೞ್ದ ಕಪಟೋಪ
ಶದಿಂ ದ್ರೋಣನಂ ಕೆಯ್ಗೆ ಮಾಡಲೆಂದು ಪಾಂಡ್ಯ ಗಜ ಘಟೆಗಳನಿದಿ
ೞ್ ತಂದೊಡ್ಡಿದಾಗಳ್—

ಕಂ || ನಿಶಿತ ವಿಶಿಖಂಗ[1][ಳಿಂ]ದೊಂ |
ದಶನಿಯೆ ಗಿರಿಕುಲಮ[2]ನಳಱುವಂತೆ ಮದೇಭ ||
ಪ್ರಸರ ಸಹಸ್ರಂ ಕೆಡೆದುವು |
ವಿಸಸನದೊಳ್ ದ್ರೋಣನಿದಿರ್ಗೆ ನೂರ್ವಲವೊಳವೇ
|| ೨೬ ||

ವ|| ಅಂತು ತನಗೆ ಮಾಱಾಂತ ಮದಾಂಧ ಸಿಂಧುರಂಗಳಂ
ಂಧುರಾರಾತಿಯೆ ಕೊಲ್ವಂತೆ ಕೊಲೆ—

ಕಂ || ಸಾಮಜಮಶ್ವತ್ಥಾಮಂ |
ನಾಮದಿ ನೊಂದಱಿದೊಡಲ್ಲಿ ಕಂಡು ಹತೋಽಶ್ವ ||
ತ್ಥಾಮಾ ಎನೆ ನೃಪನಶ್ವ |
ತ್ಥಾಮನೆ ಗೆ[3][ತ್ತೊ]ಣರ್ದನೊವಜನೊರ್ವೆಸರಿಭಮಂ
|| ೨೭ ||

ಒಗೆದ ಸುತ ಶೋಕದಿಂದಾ |
ವಗೆಯಂತೊಳಗುರಿಯೆ ಭೋಂಕನೆರ್ದೆ ತೆಱೆಯಲ್ ಹಾ ||
ಮಗನೇ ಎಂದಶ್ರುಜಲಾ |
ರ್ದ್ರ ಗಂಡನಾ ಗಂಡಿನೊಡನೆ ಬಿಸುಟಂ ಬಿಲ್ಲಂ || ೨೮ ||

1 ಳೊಂ (ಸ.). 2 ಳುರು (ಕ.). 3 ತ್ತು (ಸ.).

ವ|| ಅಂತು ಬಿಸುಟು ವಿಚ್ಛಿನ್ನ ವೀರ ರಸನುಮುತ್ಪನ್ನ ಶೋಕರ
ಸುಮಾಗಿ ನಿಜ ವರೂಥಮುಂ ಧರ್ಮಪುತ್ರನ ಸಮೀಪಕ್ಕುಯ್ದು ಮುಗ
ಮಾತಂ—

ಚಂ || ಬೆಸಗೊಳೆ ಕುಂಜರಂ ಮಡಿದುದೆಂದು ಮಹೀಭುಜನುಳ್ಳ
ಮಾಱ್ಕೆಯಿಂ
ಪುಸಿಯದೆ ಪೇೞ್ದೊಡಂ ಕಿಱಿದು ನಂಬದೆಯುಂ ರಣದಲ್ಲಿ ಮುನ್ನೆ
ಬಿ
ಲ್ಲಿಸುಟೆನಿದೆಂತು ಪೇೞ್ ಪಿಡಿವೆನಿನ್ನಿ[1]ದನೆಂದಿರದಾತ್ಮಯೋಗಿ
ನ್ನಸುವನುದಾತ್ತ ಯೋಗದೊಳೆ ಬಿಲ್ಲೊವಜಂ ಕಳೆದಂ
ರಣಾಗ್ರದೊಳ್ || ೨೯

ವ|| ಅಂತು ಭಾವಿತಾತ್ಮ[2]ನಧ್ಯಾತ್ಮ ವಿಶಾರದನಾಗಿ ಪರಮಾ
ನೊಳ್ ಕೂಡಿದನಾಗಳ್ ಪೆಣನನಿಱಿದು ಪಗೆಗೊಂಡರೆಂಬ ನಾಣ್ಣುಡಿಯ
ನನ್ನಿ ಮಾಡಿ ತಮ್ಮಯ್ಯಂ ಸತ್ತ ಮುಳಿಸಿನೊಳ್ ಕಣ್ಗಾಣ
ಧೃಷ್ಟದ್ಯುಮ್ನಂ ಧರ್ಮತನೂಜಂ ಬಾರಿಸೆ ವಾರಿಸೆ—

ಕಂ || ಕರವಾಳಂ ಘರವಟ್ಟಿಸಿ |
ಶಿರೋಜಮಂ ಪಿಡಿದು ತೆಗೆದು ಗುರುವಂ ಪಚ್ಚಂ ||
ತಿರೆ ಪಿರಿದು ಪೊಯ್ದನೆಂತ |
ಪ್ಪರೊಳಂ ಮು[3]ಳಿಸಱಿವನಾಗಲೇನಿತ್ತಪುದೇ || ೩೦

ವ || ಅಂತು ದ್ರೋಣನೆ[4]ಳೆಗೋಣ ಸಾವಂ ಸಾವುದುಂ ಭೋರ್ಗ
ದಾರ್ದ ಪಾಂಡವ ಪತಾಕಿನಿಯುಮನೊಂದು ತಲೆಯಾಗೋಡುವ ಕೌರ
ಧ್ವಜಿನಿಯುಮಂ ಬೇಱೊಂದು ಮೊನೆಯೊಳ್ ಕಾದುತಿರ್ದಶ್ವತ್ಥಾಮ
ಕಂಡು ಮುಟ್ಟಿವರ್ಪನ್ನೆಗಂ ಶೋಣಾಶ್ವೋಪಲಕ್ಷಿತ ನಿಜ ಪಿತೃ ಸ
ಕೇತನ [5]ಕಥಿತಮಾಗಿರ್ದ ರಥಮನುಪಲಕ್ಷಿಸಿ ನೋಡಿ ತಮ್ಮಯ್ಯನತೀ
ಸಾದುವನಱಿದು—

1 ರೆ (ಕ.) 2 ವಿದ್ಯಾ (ಕ.ಖ.) 3 ನಿ (ಕ.). 4 ಳ (ಗ. ಘ.). 5 ಗ್ರ (ಕ.).

|| ಒಱ[1]ತುಗುತರ್ಪ ಕಣ್ಬನಿಗಳಂ ಬರಲೀಯದೆ ಕೋಪ ಪಾವಕಂ |
ನಿಱಿಸೆ ಕನಲ್ದು ರೋಷದಿನಪಾಂಡವಮಾಗಿರೆ ಮಾಡದಂದು ಬಿ ||
ಲ್ಲಿಱಿಯನ ಪುತ್ರನಲ್ಲೆನೆನುತುಂ ಗುರುಪುತ್ರನಿದಿರ್ಚೆ ಭೀತಿಯಿಂ |
ಮಱುಗಿ ತೆರಳ್ದು ತೂಳ್ದಿ ಸುೞಿಗೊಂಡುದು ಪಾಂಡವ ಸೈನ್ಯ
ಸಾಗರಂ || ೩೧ ||

ವ || ಆಗಳುರಿಯುರುಳಿಯಂತಪ್ಪ ತನ್ನ ನೊಸಲ ಕಣ್ಣಿಂ ತೋಱಿ ಸಾಹಸಮಂ ತೋಱಿಲೆಂದು ನಾರಾಯಣಾಸ್ತ್ರಮಂ ತೊಟ್ಟೆಚ್ಚಾಗಳ್

|| ದೆಸೆ ಮಸುಳ್ದತ್ತು ವಾರ್ಧಿ ತಳರ್ದತ್ತು ನೆಲಂ ಪಿಡುಗಿತ್ತು
ತೊಟ್ಟನಾ |
ಗಸಮೊಡೆದತ್ತ ಜಾಂಡಮುಳಱಿತ್ತೆನುತಿರ್ದೆಡೆಯಲ್ಲಿ ಲೋಕಮಂ ||
ಬಸಿಱೊಳಗಿಟ್ಟು ಕಾದಳವನಾರಳವೊಡ್ಡಿಸೆ ಕಾದನಾಗಳ |
ರ್ವಿಸೆ ತೆಗೆದೆಚ್ಚ ವೈಷ್ಣವಮ[2]ನೊಡ್ಡಿಸಿ ವೈಷ್ಣವದಿಂ ಮುರಾಂತಕಂ
|| ೩೨ ||

ವ || ಅಂತಶ್ವತ್ಥಾಮನೆಚ್ಚ ನಾರಾಯಣಾಸ್ತ್ರಮಂ ನಾರಾಯಣನು ರುದೊಳೆಗೆಲ್ದನನ್ನೆಗಂ—

|| ಕವಿದೆರಡುಂ ಪತಾಕಿನಿಗಳಾಗಡುಮೆನ್ನನೆ ಸಕ್ಕಿ ಮಾಡಿ ಕಾ |
ದುವು[3]ದಱಿನಿಲ್ಲಿ ಸತ್ತರಸುಮಕ್ಕಳ ಪಾಪಮಿದೆಲ್ಲಮೆನ್ನನೆ ||
ಯ್ದುವುದುಪವಾಸದಿಂ ಜಪದಿನಾನದನೋಡಿಸಿ ಶುದ್ಧನಪ್ಪೆನೆಂ |
ಬವೊಲಪರಾಂಬುರಾಶಿಗಿೞಿದಂ ನಳಿನೀವರ ಜೀವಿತೇಶ್ವರಂ || ೩೩ ||

ವ || ಅಂತೆರಡುಂ ಪಡೆಗಳೊಂದಿರುಳುಮೆರಡುಂ ಪಗಲುಮೋರಂತೆ ಚಳಿತಪಹಾರ ತೂರ್ಯಂಗಳಂ ಬಾಜಿಸೆ ತಂತಮ್ಮ ಬೀಡುಗಳ್ಗೆ ದರಾಗಳ್—

1 ದು (ಖ. ಗ. ಘ.). 2 ನೋಡಿಸೆ (ಗ.), 3 ವಿಱಿದಿ (ಕ.), ದಱಿದಿ
4 ಪೋಗುವಾ (ಕ.).

ವ|| ಎಂಬುದುಮಂಗರಾಜಂ ಗುರುತನೂಜನನಿಂತೆಂದಂ—

ಚಂ|| ಎನಿತಳವುಳ್ಳೊಡಂ ದ್ವಿಜನ ಗಂಡಗುಣಕ್ಕ[1]ಗಿವನ್ನರಾಓ ನೆ।
ಟ್ಟನೆ ವಿಷಮೊಳ್ಳೆಗುಳ್ಳೊಡಮದೊಳ್ಳೆಯೆ ಕಾಳಿಯ ಸಾಗನಾಗದ
ಣ್ಮಿನ ಪಡೆಮಾತದೊಂದೆ ಸೇವಮಾಗಿರೆ ಕೆಯ್ದುವನಿಕ್ಕಿ ಸತ್ತ ಸಾ
ವಿನ ಪಡಿಚಂದಮಾಗಿಯುಮಿದೇಂ ನಿಮಗಟ್ಟಿಯೊ
ಗಂಡವಾತುಗಳ್ || ೪೧

ವ|| ಎಂಬುದುಂ ತ್ರೈಲೋಕ್ಯ ಧನುರ್ಧರನಪ್ಪೆಮ್ಮಯ್ಯನ ಗಂ
ವಾತನೀ ಮೀಂಗುಲಿಗಂ ಮೆಚ್ಚನಿವನಂ ಮುಂ ಕೊಂದು ಬಱಿಯ
ಪಾಂಡವರಂ ಕೊಲ್ವೆನೆಂದು ಬಾಳಂ ಕಿಱ್ತು ಕರ್ಣನಮೇಲೆಪಾಯ್ವುದು
ಕೃಪನೆಡೆವೊಕ್ಕಿದಾಗದೆಂದು ಬಾರಿಸಿ—

ಕಂ|| ಅಸದಳಮಾಗಿಯು[2][ಮೀ] ನ ।
ಮ್ಮ ಸೈನ್ಯಮಿಂತೊರ್ವರೊರ್ವರೊಳ್ ಸೆಣಸಿ [3]ಖಳ ||
ವ್ಯಸನದೊಳೆ ಕೆಟ್ಟುದಲ್ಲದೊ ।
ಡೆ ಸುಯೋಧನ ನಿನಗೆ ಮಲೆವ ಮಾರ್ವಲವೊಳವೇ
|| ೪೨

ವ|| ಎಂಬುದುಮಶ್ವತ್ಥಾಮಂ ಕರ್ಣನೊಳಾದ ಮುಳಿಸನವ[4]ಧಾರಿ
ಲಾಱದೆ ಸುಯೋಧನನನಿಂತೆಂದಂ—

ಖಚರಪ್ಲುತಂ|| ಬೀರವಟ್ಟಮನಾನಿರೆ ನೀನೀ ಸೂತಸುತಂಗೆಡೆಗೊಂಡು ಕೈ
ವಾರದಿಂದೊಸೆದಿತ್ತೊಡಮೇನಾಯ್ತೀ ಖಳನಿಲ್ಲಿ ಧನಂಜಯ ||
ಕ್ರೂರ ಬಾಣ ಗಣಾವಳಿಯಿಂದಟ್ಟಾಡಿದೊಡಲ್ಲದೆ ವೈರಿ ಸಂ।
ಹಾರ ಕಾರಣ ಚಾಪಮನಾನೀ ಸಂಗರದೊಳ್ ಪಿಡಿಯೆಂ ಗಡಾ
|| ೪೩

ವ|| ಎಂಬುದುಂ ಮುಳಿಸುವೆರಸಿದ ಮುಗುಳ್ನಗೆಯಿಂ ಕಣ
ನಿಂತೆಂದಂ—

---

1 ಱಿ (ಕ. ಗ.). 2 ಮಿನ್ನೆಂ (ಕ.), ಮಿಂನಂ (ಖ. ಘ.). ಮಿಂನುಂ (ಗ.)
3 ಬ (ಕ. ಖ. ಘ.). 4 ಧ (ಕ. ಖ.).

ಮ || ಭುವನಂಗಳ್ ಪದಿನಾಲ್ಕುಮಂ ನಡುಗಿಸಲ್ ಸಾಮರ್ಥ್ಯಮುಳ್ಳೆನ್ನ ಕೆ |
ಯ್ದುವಿನೊಳ್ ತೀರದುದಾವ ಕೆಯ್ದುವಿನೊಳಂ ತೀರ್ದಪ್ಪುದೇ ನಿನ್ನ ಕೆ ||
ಯ್ದುವನೆಂತುಂ ಬಿಸುಟಿರ್ದ ಲೆಕ್ಕಮೆ ವಲಂ ನಿಷ್ಕಾರಣಂ ಕೆಯ್ದು ವಿ|
ಕ್ಕುವ ಕಣ್ಣೀರ್ಗಳನಿಕ್ಕುವೀಯೆರಡುಮಂ ನಮ್ಮಯ್ಯನೊಳ್ ಕಲ್ತಿರೇ || ೪೪ ||

ವ|| ಎಂಬುದುಮಶ್ವತ್ಥಾಮಮಂ ಕರ್ಣನ ನುಡಿಗೆ ಸಿಗ್ಗಾಗಿ—

ಮ|| ಸ್ರ|| ಮುನಿಸಂ ಮುಂದಿಟ್ಟು ಬಿಲ್ಲಂ ಬಿಸುಡಲೆ ಬಗೆದೆಂ ಮುನ್ನ ಮಿನ್ನುರ್ಕ್ಕಿನಿಂ ನಿ |
ನ್ನನೆ ಪೀನಂ ನಚ್ಚಿ ನಿನ್ನಾಳ್ದ[1][ನೆ] ನುಡಿಯಿಸೆ ನೀನಾಡಿದೈ ಮಾತನಾಡ ||
ಲ್ಕೆನಗೀ ಸೂಟಿಲ್ಲು ಸೇನಾಧಿಪ ಪದವಿಯೊಳಿಂ ನೀನೆ ನಿಲ್ ನಾಳೆ ದುಯೋ೯ |
ಧನನಂ ಸಕ್ಕಿಟ್ಟು ಮಾಱಾಂತದಟರೊಳಳವಂ ತೋಱುವಂ ನೀನುಮಾನುಂ || ೪೫ ||

ಕಂ || ಸಾರಂಗಳ್ ನಿನ್ನ ಶರಾ |
ಸಾರಂಗಳಸಾರಮುಱಿದ ಕೆಯ್ದುಗಳೆಂತುಂ ||
ಸಾರಾಸಾರತೆಯಂ ನಾ |
ಮಾರಯ್ವಮಿದಿರ್ಚಿದರಿ ನೃಪಧ್ವಜಿನಿಗಳೊಳ್ || ೪೬ ||

ವ|| ಎಂಬುದುಂ ದುರ್ಯೋಧನಂ ಕರ್ಣನುಮನಶ್ವತ್ಥಾಮನುಮಂ ನಿಮ್ಮೊಳಗೆ ನೀಂ ಮುಳಿಯಲ್ವೇಡ ನಿಮ್ಮ ಪುರುಷಾಕಾರಮನೆ ಬಗೆ[2][ದು] ನೆಗಟ್ಟಿದಾನುಮೆನ್ನೆತ್ತಿಕೊಂಡ ಕಜ್ಜಮುಂ ನೆಗಟ್ದಲ್ಲದಿರೆನೆಂದಾಯೆಡೆ ಯಿನೆಟ್ದು ನಾಯಕರಂ ಬೀಡಿಂಗೆ ಪೋಗಲ್ವೇಟ್ದರಮನೆಯಂ ಪೊಕ್ಕು

1 ನ (ಸ.). 2 ದೆ (ಘ೯.).

ಮಜ್ಜನ ಭೋಜನ ತಾಂಬೂಲಾನುಲೇಪನಂಗಳಿಂ ಸಂಗರ ಪರಿ
ನಾಱಿಸಿ ಮಂತ್ರಶಾಲೆಗೆ ವಂದು ಶಲ್ಯಶಕುನಿಶಾರದ್ವತ ಕೃ
ದುಶ್ಶಾಸನಾದಿಗಳಂ ಬರಿಸಿ ಯಥೋಚಿತ ಪ್ರತಿಪತ್ತಿಗಳಿಂದಿರಿಸಿ—

ಶಾ || ಅಂತರ್ಭೇದದೊಳಂತು ಛಿದ್ರಿಸಿದರಾ ಗಾಂಗೇಯರಂ ಕೊ
ದಿಂತೀಗಳ್ ಪು[1]ಸಿದೀ ಘಟೋದ್ಭವನನಾ ಕೌಂತೇಯರ

[2]ಟಿಂತೆಂತಕ್ಕುಮದಂ ಮದುದ್ಯಮಮೆ ಪೇೞ್ಗಾ ವೈರಿಗಳ್ಗೊ
ನೆಂತೊಳ್ಪಂ ತಳೆವಂತು ತೇಜಮೆನಗಿನ್ನೆಂತಕ್ಕುಮಿಂ ಪೇೞ

ವ|| ಎನೆ ಶಾರದ್ವತನಿಂತೆಂದಂ—

ಚಂ || ಚಲಮನೆ ಪೇೞ್ಪೊಡಯ್ವರುಮನಯ್ದಱಯೂರೊಳೆ
ಬಾೞಿಸೆಂ

ಬಲಿ ಬಲ ಸೂದನಂ ನುಡಿಯೆಯುಂ ಕುಡದಿರ್ದುದೆ ಪೇೞ್ಗ

ಯ್ಗಲಿತನಮಂ ಸರಿತ್ಸುತ ಘಟೋದ್ಭವರಂ ಪೊಣರ್ದಿಕ್ಕಿ
ಗೆಲ್ದರೊ

ಕಲಹಮೆ ಪೇೞ್ಗಮಿಂ ಪೆಱತು ಪೇ[3]ೞ್ಪಿಡೆಯಾವುದೊ
ಕೌರವೇಶ್ವರಾ |

ವ|| ಅದಱಂದಮಿಂ ಪೆಱತು ಮಂತಣಕ್ಕೆಡೆಯಿಲ್ಲ ಮುನ್ನೆ
ಷ್ಮಸೆಂಬಮನುವಾದ ಕಾಲದೊಳ್ ಧರಾತಳಮನೊಲ್ಲಣಿಗೆಯಿಂ
ವಂತೆ ತಳಮೆಯ್ದೆ ಸುರುಳ್ವಿನಂ ಮುಯ್ಯೇೞ್ [5]ಸೂೞ್

1 ದಿ (ಕ. ಖ. ಗ. ಘ.). 2 ಟಿಂತೆಂತಟ್ಕಿಜ ಮುಪ್ಪದಂತುಮುದು ಮುದ್ಭೇ
ವೈರಿಗ| ಳ್ಗಿಂ (ಕ.). ಟಿಂತಂತಕ್ಕ ಜಮುಪ್ಪದಂತು ಮುದುದುದ್ಭೇದಾದಿ
ವೈರಿಗ| ಳ್ಗಿಂ (ಖ.), ಟದಕಜ್ಜಮುದಂ ಮುದುದ್ಯಮುಮೆ ಪೇಳಾ ವೈರಿಗಳ್ಗೊ
ನೆಂ (ಗ.), ಟದ ಕಜ್ಜಮುದಂ ಮುದುದ್ಯಮುಮು ಪೇಳ್ಗಾ ವೈರಿಗಳ್ಗೊ
ನೆಂ (ಘ.). 3 ೞ್ಪೊ (ಕ.). 4 ಕ್ಷುಕ (ಖ.ಗ), ಕ್ಷುಃಕ್ಕ (ಘ.). 5 ಸೂಳ್ಪಿದ
ಸೂಳ್ಪಿದ (ಗ. ಘ.).

ಸಮುಮನಿಂದ್ರಂಗೆ ತನ್ನ ಸಹಜ ಕವಚಮಂ ತಿದಿಯುಗಿದು ಟ್ಟ ಚಾಗದ ಪೆಂಪುಮಂ ದಿಗ್ವಿಜಯಂಗೆಯ್ದು ಮಿಡಿದನಿತು ಬೇಗದಿಂ ಸಂಧನಂ ನೆಲಕ್ಕಿಕ್ಕಿ ಪುಡಿಯೊಳ್ ಪೊರಳ್ಚಿ ಮಲ್ಲಯುದ್ಧದೊಳ್ ಡಿ[1][ಗೊ]ತ್ತಿದ ಭುಜಬಲ ಭೀಮನಂ ಗೆಲ್ದ ಸಾಹಸಮುಮಂ ನಮ್ಮ ಪಿಲ್ಲಮಂ ತೊತ್ತಳದುಳಿದು ಕೊಲ್ವ ಘಟೋತ್ಕಚನೆಂಬ ರೂಕ್ಷ ಸನಂ ಕೊಂದ ಬೀರಮು [2][ಮನಾ]ಲೋಕಾಂತರಂ ನೆಗಳ[3]—

ಕಂ ॥ ನೆಗಟ್ದ ಕಲಿತನದ ಚಾಗದ ।
ಬಗೆ ತನ್ನೊಳ್ ನೆಗಟೆತ್ತು ನೆಗಟ್ದರೆ ಸಂದಂ ॥
ಗಗಣಿತ ಗುಣಂಗೆ ಕರ್ಣಂ ।
ಗೊಗಸುಗಮೇ ಕಟ್ಟು ಬೀರವಟ್ಟಮನರಸಾ ॥ ೪೯ ॥

ರಥ ಯಾನಪಾತ್ರದಿಂ ಪರ ।
ರಥಿನೀ ಜಳನಿಧಿಯ ಪಾರಮಂ ಸಲ್ವ ಜಗ ॥
ತ್ಪ್ರಥಿತ ಭುಜ ದರ್ಪದಿಂದತಿ ।
ರಥ ಮಥನಂ ಕರ್ಣಧಾರನಲ್ಲನೆ ಕರ್ಣಂ ॥ ೫೦ ॥

ವ॥ ಎಂದು ನುಡಿದ ಕೃಪನ ಮಾತಂ ನೃಪಂ ಮನದೇಗೊಂಡು ನ ಮೊಗಮಂ ನೋಡಿ—

ನಡುಗುವುದಂತೆ ಪಾಂಡವ ಬಲಂ ನಿನಗರ್ಜುನನೆಂಬನೆಂದುಮು ।
ಕುರ್ಡುಗಿ ಸುರುಳ್ವನೀಯೆಡೆಗೆ ಪೇೞ್ ಪೆಱರಾರ್ ದೊರೆ ವೀರವಟ್ಟಮಂ ॥
ತಡೆಯದೆ ಕ[3]ಟ್ಟ ವೈರಿಗಳ [4]ಪಟ್ಟನೆ ಪಾಱಿಸಿ ಕಾವುದೆನ್ನ ಬೆ ।
ಳ್ಗೊಡೆಯುಮನೆನ್ನ ಪಟ್ಟಮುಮನೆನ್ನುಮನಂಗ ಮಹೀತಳಾಧಿಪಾ ॥ ೫೧ ॥

ವ॥ ಎಂಬುದುಮಂಗಾಧಿರಾಜಂ ನಿನ್ನಾಳ್ಗಳೊಳಾನಾರ ದೊರೆಯೆ ಕಾರುಣ್ಯಂ ಗೆಯ್ಪೆಯಾಗಿ ಬೆಸಸಿದ ನಿನ್ನ ದಯೆಗೆಯ್ದ ವೀರವಟ್ಟ

1 ಗೆ (ಸ). 2 ಮಾ (ಸ). 3 ಟ್ಟಿ (ಕ). 4 ತ (ಕ.).

ಮೆಂಬುದೆನಗೆಣ್ಬೆರಲ ಪಟ್ಟಮೆಂಬುದುಂ ಬದ್ದವಣಂ ಬಾಜಿಸಿ ಕಣ
ಕನಕ ಪೀಠದೊಳ್ ಕುಳ್ಳಿರಿಸಿ—

ಹರಿಣಿ || ಮೊರೆಯೆ ಪಱೆಗಳ್ ಭೋರೆಂದೋರಂತೆ ಮಂಗಳ ಗೀತಿಗ
ನೆರೆಯೆ ಗಣಿಕಾನೀಕಂ ಬಂದಾಡೆ ಪುಣ್ಯ ಜಲಂಗ[1]ಳಿಂ ||
ತರಿಸಿ ಮಿಸಿಸುತ್ತಾಗಳ್ ತಾಂ ತನ್ನ ಕೆಯ್ಯೊಳೆ ಕಟ್ಟಿದಂ |
ಕುರು ಪರಿವೃಢಂ ಕರ್ಣಂಗಾ ವೀರವಟ್ಟದ ಪಟ್ಟಮಂ || ೫

ವ|| ಅಂತು ವೀರವಟ್ಟಮಾ ವೀರನ ನೊಸಲೊಳಸವಳಮ
ಪಾಶ್ರಯಂ ಬಡೆಯೆ ಕಟ್ಟಿ ನಿಜಾಂತಃಪುರ ಪರಿವಾರಂಬೆರಸು ಸೇಸೆಯ
ತನ್ನ ತುಡುವ ತುಡಿಗೆಗಳೆಲ್ಲಮಂ ನೆಱೆಯೆ ತುಡಿಸಿ ದೇವ ಸ
ಪದಿನೆಂಟು ಕೋಟಿ ಪೊನ್ನುಮಂತರಿಸಿ ಕೊಟ್ಟು ಮಣಿಮಯ ಮಂ
ಯೋಗದೊಳ್ [2]ನೆಱೆಯೆ ಪಣ್ಣಿದ ಮದಾಂಧ ಸಿಂಧುರಮನೇಱಲ್
ಕೊಟ್ಟು ಬೀಡಿಂಗೆಪೋಗೆನೆ ಪೋಗೆ ಹಸ್ತಿಯ ಬೆಂಗೆವಂದು ಸುತ್ತಿ
ಪಗಲಂ ತಡವಿಕ್ಕಿದಂತೆ ಬೆಳಗುವ ಕೆಯ್ದೀವಿಗೆಗಳ ಬೆಳಗೆ ಬೆ
ತಲೆಯೊಳ್ ನಾಲಗೆಯುಳ್ಳ ಬೂತುಗಳ್ಗೆಲ್ಲಮಿಲ್ಲೆನ್ನ[3]ದೀಯುತ್ತುಂ
ನಿವಾಸಕ್ಕೆ ವಂದು ನಿತ್ಯದಾನಕ್ಕೆಂದು ನಿಯೋಗಿಗಳ್ ತಂದು ಪು
ಪಂಚ ರತ್ನದ ಪೊನ್ನ ರಾಶಿಗಳನರ್ಥಿಜನಕ್ಕೆಗೋಸನೆಯಿಟ್ಟು ಕುಡವೆ
ನಾಯಕರ್ಗೆಲ್ಲಮುಡಲುಂ ತುಡಲುಂ ಕೊಟ್ಟು ನೇಸಱ್ ಮ
ವಾಗಳ್ ನಮ್ಮ ಪಡೆಯನೀ ಮಾಱ್ಕಿಯೊಳೊಡ್ಡಿಮೆಂದು ಪಡೆವ
ಬೆಸಸಿ ನಿಜ ವಿಜಯ ತುರಗ ರಥಂಗಳನರ್ಚಿಸಿ ಪೊಡೆವಟ್ಟು ವಭ್ಯಾಸ್ತ
ದೊಳಾಯಿರುಳಂ ಕಳೆದಾಗಳ್—

ಕಂ || ಉದಯಗಿರಿ ತಟದೊಳುದಯಿಸು |
ವದಿತಿ ಪ್ರಿಯ ಪುತ್ರನಲ್ಲದಿತ್ತೊರ್ವಂ ಭಾ ||
ನು ದಲೊಗೆದನೆನಿಪ ತೇಜದ |
ಪೊದಱ್ಕೆಯಿಂ ಜನದ ಮನ[4]ಮನಲೆದಂ ಕರ್ಣಂ || ೫

1 ಳಂ (ಕ.). 2 ಮೆ (ಕ.). 3 ದಿತ್ತುಂ (ಕ. ಖ.). 4 ದೊಳೆಸೆದಂ (

ವ॥ ಆಗಳಾ ಚತುರ್ವೇದ ಪಾರಗರಪ್ಪ ಧರಾಮರರ್ಗೆ ನಿತ
ಮಂ ಕೊಟ್ಟು ಸಿಡಿಲ ಬಳಗಮನೊಳಕೊಂಡಂತೆ ತಱ ತಱಸಿ ಪೊಳೆವ
ಗಳ್ ತೀವಿದ [1]ವಾರುವದ ಬೋರಗುದುರೆಗಳೊಳ್ ಪೂಡಿದ
ರ್ಜನ್ನ ರಥಮನೇಱ ಮುನ್ನೊರ್ವನೆ ಶರ ಶಯನದೊಳಿರ್ದ
ೇಯನಲ್ಲಿಗೆ ಬಂದು ರಥದಿಂದಮಿೞಿದು ಮೂಱು ಸೂೞ್
ಂದು ತದೀಯ ಪಾದ ಪದ್ಮಂಗಳಂ ತಲೆಯೊಳಿಟ್ಟುಕೊಂಡು—

ಕಂ॥ ಆಮ್ನಾತಜ್ಞಯದೆ ಮುಳಿದುಂ।
ನಿಮ್ಮಡಿಯಂ ನೋಯೆ ನುಡಿದೆನುಱದೇಳಿಸಲೇ॥
ನೆಮ್ಮಳವೆ ಮಱೆವುದಾ ಮನ।
ದು[2]ಮ್ಮಚ್ಚರಮುಜ್ಜ ನಿಮ್ಮನೆರೆಯಲೆ ಬಂದೆಂ ॥ ೫೪ ॥

ಧುರದೊಳ್ ನಿಮ್ಮಡಿಯುಂ ಗೆಲ।
ಲರಿಯ[3]ವುಮಾಪಾಂಡುಸುತರನೆಮ್ಮಂದಿಗರ॥
ಚ್ಚರಿಯಲ್ತೆ ಗೆಲ್ವರೆಂಬುದು।
ಹರಿಗನೊಳಿಱದೆಂತುಮೆನ್ನ ಚಲಮನೆ ಮೆಱೆವೆಂ॥ ೫೫ ॥

ವ॥ ಎಂಬುದುಂ ಕುರುಪಿತಾಮಹನಹರ್ಪತಿ ಸುತನನಿಂತೆಂದಂ—

ದ್ಯಂ॥ ನುಡಿವುದಂ ಪತಿಭಕ್ತಿಯ ಪೆಂಪಿಂ ನೀಂ ನುಡಿದೈ ಪೆಱ
ತೆಂದದಿಂ।
ನುಡಿದೆಯಲ್ತೆ ಮದಾಯಮನೋಘಂ ಸೂಟ್ಪಡೆಯಲ್ಕೆನಗಕ್ಕುಮಿ।
ನ್ನೆಡೆಯೊಳೆಂದೆಮದೆಂದುದದೇಂ ತಪ್ಪಾದುದೆ ನಮ್ಮೊವಜರ್ ಜಸಂ।
ಬಡೆದ ಭಾರ್ಗವರಪ್ಪುದಱಂದಂ ನಂಟರುಮಂಗಮಹೀಪತೀ
॥ ೫೬ ॥

ವ॥ ಅದಲ್ಲದೆಯುಂ ನೀನೆಮಗೆ ಕುಂತಿಯ ಗಾಂಧಾರಿಯ ಮಕ್ಕಳ
[4][ವೊ]ಮ್ಮನೈ—

[1] ಪಾಂ? (ಪ.). 2 ಮ್ಮಳಿಮಚ್ಚರಮನಜ್ಜ ನೆರೆ (ಕ.ಖ.). . . . ಮಚ್ಚಮನಜ್ಜ ನೆರೆ (ಗ.), ಮಚ್ಚರಮನಜ್ಜ ನಿಮ್ಮನೆರೆ (ಘ.). 3 ರು (ಗ.ಘ.) 4 ಮ (ಪ.).

ಉ॥ ಸಿನ್ನನೆ ನಚ್ಚಿದಂ ಕುರು ಮಹೀಪತಿ ನಿನ್ನ ಶರಾಳಿಗಳ಼್ಗೆ ಮ
ನ್ನನ್ನಡುಗುತ್ತುಮಿರ್ಪುದರಿ ಸಾಧನ ಸಂಪದಮಂತೆ ಶಸ್ತ್ರ
ಪನ್ನನೆ ಆಗಿ ಶಲ್ಯನನೆ ಸಾರಥಿಯಾಗಿರೆ ಮಾಡಿ ಕಾದು ನಿ
ನ್ನಿನ್ನಯ ಬಲ್ಲ ಮಾಟಿಕ್ಕೆಯೋಳಿದಂ ನುಡಿದೆಂ ನಿನಗಂಗವ

ಕಂ॥ ಏನೆ ನೆಗಟ್ಟಿ ಕುಲದ ಚಲದೊ।
ಳ್ಪಿನ ಭೂಪನನೆನಗೆ ತೇರನೆಸಗೆಂದೊಡೆ ಸ॥
ದ್ವಿನಯಮುಟಿದುರ್ಕಿ ಕುಲ ಹೀ।
ನನೆಂಬ ಪರಿವಾದಮೀಗಳೆನಗಾಗಿರದೇ

(ಆಯದ ಕಟ್ಟಾಳ್ ನೀಂ ಪೊದ।
ಲೀ ಯುಗದೊಳ್ ಪೆಜರುವೊಳರೆ ಸಾವಕ್ಕೆ ಜಯ
ಶ್ರೀಯಕ್ಕೆ ಧಾತ್ರನಿಂ ಕ।
ಟ್ಟಾಯದ ಬಟಿಸಂದು ನಿಮ್ಮನಾಂ ಮೆಚ್ಚಿಸುವೆಂ

ವ॥(ಎಂಬುದುಂ ಸಿಂಧು ತನೂಜನಂಗಾಧಿರಾಜನ ನಯ
ಯುದ ಪಾಟಿಯ ಪಸುಗೆಯ ನುಡಿಗಳ಼್ಗೆ ಮನದೇಗೊಂಡೀತಂ
ನನಲ್ಲನುಭಯ ಕುಲ ಶುದ್ಧನಾಗಲೆವೇಟ್ಕುಮೆಂದು ನಿಶ್ಚೈಸಿ
ಗಿಂಬು ಕೆಯ್ವೊಡಂ ಸುಯೋಧನನ ರಾಜ್ಯಮನೊಲ್ವೊಡಂ
ಸಾರಥಿಮಾಡಿ ಕಾದುವುದೆಂದು ಪರಸಿ ಪೋಗೆಂಬುದುಂ ಮಹಾ
ಮೆಂದು ಪೊಡೆವಟ್ಟು ಸಂಗ್ರಾಮ ಭೂಮಿಗೆ ವಂದು ಹಸ್ತ್ಯಶ್ವರಥ
ಬಲಂಗಳನೊಂದುಮಾಡಿ ಮಕರವ್ಯೂಹಮನೊಡ್ಡಿದಂ ಪಾಂಡವ
ನಿಯುಮರ್ಧಚಂದ್ರವ್ಯೂಹಮನೊಡ್ಡಿ ನಿಂದುದಿತ್ತ ಪರ ಸೈನ್ಯ
ಪುರುಷೋತ್ತಮನನಿಂತೆಂದಂ—

ಮ॥ ಸ್ರ॥ ಪಿರಿದುಂ ಕಾಯ್ಪಿಂದಮೆನ್ನೊಳ್ ನೆರದಿಱಿಯಲೆ
ಸಂಸಪ್ತಕ
ಕರೆವರ್ ಮತ್ತಿತ್ತ ಕರ್ಣಂ ಚಲ ಚಲದಿಱಿಯಲ್ ನಿಂ
ಗೆಯ್ವುದೆಂ

ನರನಂ ಮುನ್ನಂ ತ್ರಿಗರ್ತಾಧಿಪ ಬಲಮನದಂ ನುರ್ಗು ನೀನೆಂದು ತೇರಂ ।
ಹರಿ ಕೊಂಡತ್ತುಯ್ದನಿತ್ತೊರ್ವೋದಲುಭಯ ಬಲಂ ತಾಗಿ ಕಾದಿತ್ತು ಬೇಗಂ ॥ ೬೦ ॥

ವ॥ ಅಂತು ಚತುರ್ವಲಂಗಳೊಂದೊಂದಱೊಳ್ ಕಾದೆ ನಟ್ಟ
ರಲ್ಪಿಡಿದು ಕರಗದ ಧಾರೆಯಂತೆ ಸುರಿವ ನೆತ್ತರ ಧಾರೆಗಳಂಬಿರಿವಿಡುವಿನ
ತ್ತಮಿತ್ತ [1]ಮುರ್ಚಿವೋಪ [2]ಕಿತ್ತಂಬುಗಳಿಂ ಸುರುಳ್ದುರುಳ್ದ ಧನುರ್ಧರ
ಮಂ ಧನುರ್ಧರರೆಚ್ಚ ಶರನಿಕರಂಗ[3]ಳಿಂ ನೆಪ್ ಪೇಱುವಂತಂಬನೆ
ೀಱ ಪೆರಗೆಡೆದ ತುರುಷ್ಕ ತುರಂಗಂಗಳುಮಂ ಕೆದಱ ಬೆದಱ
ಂಕೊಂಡು ತೊತ್ತಳದುಳಿವ ಮದೇಭಂಗಳುಮಂ ಮದೇಭಂಗಳನಾರ್ದು
ಟ್ಟಿಕ್ಕು[4]ವ ನಿಷಾದಿಗ [5][ಳಱ]ಯೆ ಪೊರ್[6]ಜೆವಿಡಿದು ಕೊರಲ ಬ[7]ಳಿಗ
ೊಳೆ ಕಾಲ್ಗೋದು ಪರಿಯಿಸುವ ರಸತ್ತಾರುಗರುಮಂ ಆ ರಸತ್ತಾರುಗ
ಡುವಿಟ್ಟಿಯ ಪಿಡಿಕುತ್ತಿನ ಕಕ್ಕಡೆಯ [8]ಕೋೞ್ಗೆ ಮರ್[9]ಪಟಲಂ ಪಾಯ್ದು
ಡೆದನಾರೂಢದಿಂ ಪೇಸೇಱ ತುಱದು ಕೊಲ್ವ ಕರಿಗಳ ಕರ [10]ವದನ
ಾತ್ರ ಲಾಂಗೂಲ ಘಾತದಿಂದ ಮುಡಿದು ಕೆಡೆದ ರಥಂಗಳಂ ರಥಂಗಳಿ
ಡೆಯೊಳ್ ಕಿಂಕೊಟಿಯಾಗಿ ಪೆತ್ತ ಕೆನ್ನೆತ್ತರೊಳ್ ಮೆತ್ತಿ ರೂಪಱಯ
ಾಗದಂತಿರ್ದ ವೀರಭಟರಗುರ್ವಂ ಪಡೆಯೆ ಕರ್ಣನನೇಕ ವಿಕರ್ಣ
ೋಟಿಗಳಿಂ ಪಾಂಡವ ಬಲಮನಸುಂಗೊಳೆ ಕಾದುವಲ್ಲಿ ಪಾಂಡವ ಬಲ
ೊಳ್ಪೆಸರಱಕೆಯ ನಾಯಕಂ ಕೃತವರ್ಮಂ ಕೌರವ ಬಲದ ನಾಯಕಂ
ತ್ರಸೇನನನಗುರ್ವಾಗೆ ತಾಗಿ—

ಕಂ॥ ಚಿತ್ರ ಪತತ್ರಿಯೊಳೆಱಪ ಪ ।
ತತ್ರಿಗಳಂ ಕಡಿದು ಚಿತ್ರಸೇನನನಾಗಳ್ ॥

---

1 ಮುರ್ಚ್ಛಿ (ಕ). ಮೂರ್ಚಿ (ಗ.). 2 ಕೆ (ಕ.). 3 ಳಿನೆಯಿ ಪರ್ವಂ
.), ಳಿನೆಯಿ ಪೆರ್ವಂ (ಗ. ಘ.). 4 ವ ನಿಷಾದಿಗಳುಮಂ ನಿಷಾದಿಗ (ಕ.).
ಳಱ (ಸ.). 6 ಜ (ಕ). 7 ಳೆ (ಕ.), 8 ಕೋಲ್ಗೆ (ಕ.). ತೋೞ್ಗೆ (ಗ).
ವಟ್ಟ (ಕ.) 10 ರ (ಕ.).

ಚಿತ್ರ [1]ವಧಮಾಗೆ ಕೊಂದೊಡೆ ।
ಧಾತ್ರಿಗೆ ತಾಂ ಚಿತ್ರಮಾಯ್ತು ಭುಜ ಬಲಮವನಾ ॥ ೬೧

ವ ॥ ಅಂತು ಕೌರವ ಬಲ ಪ್ರಧಾನ ನಾಯಕನಪ್ಪ ಚಿತ್ರಸೇ
ಕೃತವರ್ಮನ ಕೆಯ್ಯೊಳತೀತನಾದುದರ್ಕೇವೈಸಿ—

ಕಂ ॥ ಅತಿ ಚಿತ್ರಂ ಚಿತ್ರನವಿ ।
ಶ್ರುತ ಶೌರ್ಯಮಿದೆನಿಸಿ [2]ತಾಪ ಚಿತ್ರನನಂತಾ ॥
ಪ್ರತಿವಿಂಧ್ಯಂ ವಿಂಧ್ಯಾಚಲ ।
ಪತಿಯವೊಲವಿಚಳಿತನಾತನಂ ಬಂದಾಂತಂ ॥ ೬

ಆಂತವನ [3]ಮೇಗೆ ಶಿತ ಶರ ।
ಸಂತತಿಯಂ ಸುರಿಯೆ ನೋಡಿ ಶರ ಪರಿಣತಿಯಂ ॥
ತಾಂ ತೋರ್ಪನೆನಗೆನುತ್ತಿರ ।
ದಂತನಿತುಮನೊಡನೆ ಕಡಿದನೆಡೆಯೊಳೆ ಚಿತ್ರಂ ॥ ೬೩

ಕಡಿದೊಡೆ ಕಡುಪಿಂದಂ ಕಿಡಿ ।
ಕಿಡಿಯಾಗಿ ಶಿತಾಸ್ತ್ರನಿಕರಮಂ ಪ್ರತಿವಿಂಧ್ಯಂ ।
ಕಡಿದವನ ರಥಮನೊರ್ಮೆಯೆ ।
ಕಡಿದಂ ತಲೆಯುಮನದೊಂದು [4]ದಾರುಣ ಶರದಿಂ ॥ ೬೪

ವ ॥ ಅಂತು ಚಿತ್ರನಂ ಕೊಂದು ಕುರುಕ್ಷೇತ್ರದೊಳ್ ತನ್ನ ಮಾ
ಮಾತಾಗೆ ಕೌರವ ಬಲಮೆಲ್ಲಮಂ ಪ್ರತಿವಿಂಧ್ಯನವಂಧ್ಯ ಕೋಪೋದ್ರೇ
ದಿಂದಾಸ್ಫೋಟಿಸಿ ಕೊಲ್ವಾಗಳ್—

ಮ ॥ ಸ್ರ ॥ ಕುರುಸೈನ್ಯಾಂಭೋಧಿ ತೂ[5]ಳ್ದಿಯ್ದುಗಿದಪುದಿದನಾರಿಲ್ಲಿ
ಕೆಯ್ಕೊಳ್ವರೀ ಸಂ
ಗರದೊಳ್ ನಿಲ್ವನ್ನರಾರೆಂಬೆಡೆಯೊಳಿದಿರೊಳಾನಲ್ತೆ
ಬಂದಿರ್ದೆನೆಂ

1 ವಿಧಮಾಗಿ (ಖ. ಗ. ಘ.). 2 ಕಾ (ಗ. ಘ.). 3 ಮೆಡೆಗೆ (ಗ.), ಮೆ
(ಘ.). 4 ವಾರು (ಖ. ಘ), ವಾರ (ಗ.). 5 ಳ್ದತ್ತು (ಖ.).

ಲ್ಲರುಮಂ ಸಂತ್ರೈಸಿ ಕಣ್ಬಿಲ್ ಕಱೆ ಪೆಱೆ ನೊಸಲೊಳ್ ಚಂಡ
ದೋರ್ದಂಡದೊಳ್ ಕಂ।
ಧರದೊಳ್ ತನ್ನುತ್ತಮಾಂಗಾಂತರದೊಳೆಸೆಯೆ
ನಿಂದಾಂತನಾಚಾರ್ಯ ಪುತ್ರಂ ॥ ೬೫ ॥

ವ॥ ಆಗಳ್ ಪ್ರತಿವಿಂಧ್ಯನಂ ವಿಂಧ್ಯಾಚಲಮನೆಡಗಲಿಸಿದಗಸ್ತ್ಯ
ತೆ ಭೀಮಸೇನಂ ತಡೆಯದೆಡಗಲಿಸಿ ರುದ್ರಾವತಾರನ ರಥಕ್ಕದಿರದೆ
ಸ್ತ್ರಿ ರಥಮಂ ಪರಿಯಿಸಿ—

ಂ ॥ ನಿನಗುಱದೇನುಮಲ್ಲದೞಗಂಡರಿದಿರ್ಚುವರಲ್ಲರೆನ್ನನಾಂ।
ಪನಿತಳವುಳ್ಳೊಡಿತ್ತ ಮಗುೞೆಂದು ಶರಾವಳಿಯಿಂದೆ
ಪೂೞ್ದೊಡಂ।
ಬಿನ ಸರಿ ಸೋನೆ ತಂದಲಿದು ದಲ್ ಪೊಸತಾಯ್ತೆನೆ
ಕಂಡರೆಲ್ಲಮಂ ಕ
ಬಿನ ಮೞೆಗಾಲವಾಯ್ತು ಕುರುಭೂಮಿಗೆ ಭೀಮನದೇಂ
ಪ್ರತಾಪಿಯೋ ॥ ೬೬ ॥

ಗದೆಯೊಳೆ ಜಟ್ಟಿಗಂ ಪವನ ನಂದನನೆಂಬರ ಮಾತು ಮಾತದ।
ಲ್ಲದು ಸುರಸಿಂಧು ಪುತ್ರ ಗುರು ಕರ್ಣ ಕೃಪ ಪ್ರಮುಖರ್ಕಳಿಂತು
ನೇ ॥
ರಿದರೆ ಶರಾಸನಾಗಮದೊಳೆಂಬಿನಮಂಬರದೊಳ್ ಸುರರ್ಕಳೇಂ ॥
ಪುದಿದನೊ ಬಾಣ ಜಾಲದೆ ಗುರು ಪ್ರಿಯನಂದನನಂ
ಮರುತ್ಸುತಂ ॥ ೬೭ ॥

ವ ॥ ಆಗಳಶ್ವತ್ಥಾಮಂ ಭೀಮೋದ್ದಾಮ ಶ್ಯಾಮ ಜಳಧರವಿಮುಕ್ತ
ವಳಿಯ ಬಳಸಂ ಕಂಡು ಮುಗುಳ್ನಗೆ ನಕ್ಕುಮೀತನುಮೆಮ್ಮಂ ಬಳಸಿ
ನೆಂದು—

॥ ಅನಲ ಶಿಖಾ ಕಳಾಪವನೆ ಭೋರ್ಗರೆದಾರ್ದುಗುಳ್ವನ್ನೆಮಪ್ಪಗು।
ರ್ವಿನ ಶರ ಸಂಕುಳಂಗಳೊಳೆ ಭೋರ್ಗರೆದಾರ್ದಿಸೆ ಭೀಮನೆಚ್ಚ ನ॥

ಚ್ಚಿನ ಘನ ಬಾಣ ಜಾಳಮುಮ ಭೋಂಕನೆ ನೋಡುವೊಡಾಳ
ಜಾಳವ
ಯ್ತೆನೆ ಕಡಿದೊಟ್ಟಿ ಸುಟ್ಟುವು ಪತತ್ರಿಗಳಂ ಗುರುಪುತ್ರನಂಬುಗ
| ೬೮ |

ವ|| ಅಂತು ಗುರು ನಂದನಂ ಮರುನ್ನಂದನ ವಿರಚಿತ ಸಿಶಿ
ನಿಶಿಖ ಪಂಜರಮನಟಿದು ಕಟಿಕುಟಿಂ ಮಾಡಿಯುಮನಿತಜಿತೋ
ಮಾಣದೆ---

ಕಂ|| ತೇರಂ ಕುದುರೆಯನೆಸಗುವ |
ಸಾರಥಿಯ ಪೊಡರ್ಪನಯ್ದು ಬಾಣದೊಳುಪಸಂ ||
ಹಾರಿಸಿ ತಟಿತಟಿ ತೊಳಗುವ |
ನಾರಾಚದಿನೆಚ್ಚನೂಜಿ ಭೀಮನ ನೊಸಲಂ || ೬೯

ಮಿಸುಗುವ ನೊಸಲಂ ನಟ್ಟ |
ರ್ವಿಸುವಿನೆಗಂ ತೂಗಿ ತೊನೆವ ನಾರಾಚಮದೇ ||
ನೆಸೆದುದೊ ತದ್ವದನಾಂಭೋ |
ಜ ಸೌರಭಾಕೃಷ್ಟ ಮಧುಪ ಮಾಲಾಕೃತಿಯಿಂ || ೭೦

ನಡೆ ನಾರಾಚದ ನೋವಿನ |
ನಡುಕಂ ಪಿರಿದಾಯ್ತು ಸ[1][ರ್ಪ ಯೋನಿ] ಯ ಸೆರೆಯಂ
ಬಿಡಿಸಿದವೊಲೆಚ್ಚು ಪಾಯ್ದು |
ತ್ತೊಡನೊಡನೆ ಕದುಷ್ಣ ಕೃಷ್ಣ ರುಧಿರ ಜಲೌಘಂ || ೭೧

ನಡುಗಲ್ಕೆರ್ದೆ ಬೆಮರಲ್ ತನು|
ತೊಡರಲ್ ನಾಲಗೆ ತಗುಳ್ದುದಾ ಮಾರ್ಗಣದಿಂ ||
ಗಡ ಮತ್ತುಟಿದರನೆಂತುಂ |
ಮಡಿಪದೆ ಗುರು ತನಯನೆಚ್ಚ ಶಿತ ನಾರಾಚಂ || ೭೨

1 ರ್ಪ ರೋಗಿ (ಕ. ಗ. ಘ.), ರ್ಪ ಯೋಗಿ (ಖ).

ವ || ಅಂತು ಭೀಮಸೇನಂ ನಾರಾಚ ಘಾತದಿಂ ಪುಣ್ಣೞ್ಗೞ್ತುರ್ಚ ಬಸ
ಱಿದುಸಿರಲಪ್ಪೊಡಮಾಱದೆ ಬಿಲ್ಲ ಕೊಪ್ಪಂ ಪಿಡಿದೆಱಗಿ ಕಿಱಿದಾನುಂ
ೀಗ[1]ಮಿರ್ದು ನೊಸಲೊಳ್ ನಟ್ಟ ನಾರಾಚಮನೆಂತಾನುಂ ಕಿೞ್ತು ತನ್ನಿಂ
ಾನೆ ಚೇತರಿಸಿ ಸಿಂಹನಾದದಿನಾರ್ದು—

ಂ || ಖರಕರ ಬಿಂಬದಿಂ ಕಿರಣ ಸಂತತಿಗಳ್ ಪೊಱಪೊಣ್ಮಿದಪ್ಪುವೆಂ |
ಬರ ನುಡಿ ಪೋ[2]ಲ್ವಿವೆತ್ತುದೆನೆ ಬಾಣಧಿಯಿಂದಿರದುರ್ಚಿಕೊಂಡು
ವಿ ||
ಸ್ಫುರಿತ ಶರಂಗಳೆಂಟನವಱ[3]ೊಳ್ ಪೊಳೆವಯ್ದು ಶರಂಗಳಿಂ ಸುರು|
ಳ್ದುರುಳ್ವಿನಮೆಚ್ಚನಾ ದ್ವಿಜನ ಸೂತ ವರೂಥ ತುರಂಗಮಂಗಳಂ
|| ೭೩ ||

ಕಂ || ಪೆಱವುಱಿದ ಮೂಱು ಮಿಱು ಮಿಱು |
ಮಿಱುಪ ಶಿತಾಸ್ತ್ರಂಗಳಿಂ ದ್ವಿಜನ್ಮನ ನೊಸಲಂ ||
ನೆಱಗೊಳ್ವಿನಮೆಚ್ಚೊಡೆ ಕ |
ಣ್ದೆಱ[3]ದವೊಲಾಯ್ತುದಟುಮಳವುಮಾ ಮಾರುತಿಯಾ||೭೪||

ವ || ಆಗಳಶ್ವತ್ಥಾಮಂ ಹೇಮ ಪುಂಖಾಂಕಿತ ಭೀಮ ಸಾಯಕ
ಘಾತದಿಂದಱಿಯೆ ನೊಂದು ಘೋರೆಂದು ಕವಿವ ಬಿಸುನೆತ್ತರ್
ಣ್ಣಂ ಕವಿಯೆ ಸೀಂಟಿಕಳೆದು ನಡು[3]ಕೋಲ್ವರಂ ನಟ್ಟ ಕೂರ್ಗಣೆಗಳಂ
ಱಿವೆರಸು [4]ತೊಱ[3]ದು ಕಳೆದು—

ಕಂ || ಅಳವೆನಿತು ಚಾಪವಿದ್ಯಾ |
ಬಳಮೆನಿತುಂಟನಿತುಮೆಯ್ದೆವಂದಿಲ್ಲಿ ಪುದುಂ ||
ಗೊಳಿಸಿದುದೆ[5]ನೆ ಕಲ್ಪಾನಲ |
ವಿಳಯಾಂತಕ ರೂಪನಾದನಶ್ವತ್ಥಾಮಂ || ೭೫ ||

ವ || ಆಗಳ್ ಸವ್ಯಾಪಸವ್ಯಾ ಭ್ರಾಂತೋದ್ಭ್ರಾಂತಂಗಳೆಂಬ ರಥ[6]

1 ಮೆಟ್ಟಿ (ಕ.). 2 ಲ್ಮೆ (ಕ.). 3 ಕಾ (ಕ.). 4 ಕೊ (ಕ.). 5 ನೆ.
. | (ಗ. ಘ.), ನೆ ಕೋಪದಿ | (ಘ!.). 6 ಕಲ್ಪನಾ (ಕ.).

ಕಲ್ಪವಿಶೇಷ ವಿನ್ಯಾಸಂಗಳನಱಿದು ಸಾರಥಿಗಳ್ ಚೋದಿಸುವ
ೞ್ವರ ರಥಂಗಳುಂ ಸುಟ್ಟುರಿಯೊಳಗಣ ತಱಿಗೆಲೆಯಂತೆ ತಿಱ್ರಿನೆ ತಿ[1]ರಿ

ಚಂ || ಮುೞಿಸಱುರ್ದೆಯ್ದೆ ಕಣ್ಗೞೊಳೆ ಪೀರ್ವವೊಲುಗ್ರ
ಶರಾನಲಾರ್ಚಿಯಿ

ದೞುರ್ವವೊಲೆಯ್ದೆ ಚೋದಿಸಿ ಪರೂಥಮನಿಂ
ಬರ್ದುಕಾಡೆಯೆಂದಸು

ಗೊಳೆ ಮೊನೆಯಂಬುಗಳ್ [2]ತನುಪನ[3]ಳ್ದೞ್ವೋಪಿನಮೆಚ್ಚು
ನೆತ್ತ

ಚ್ಚೞಿಸಿ ರಥಂಗಳೊಳ್ ಕೊಳಗೊಳುತ್ತಿರೆ ಕಾದಿದರೊರ್ವ
ರೊರ್ವರೊಳ್ || ೭

ವ || ಅಂತು ಮುೞಿಸಿನ ಮೋಪಿನ ಗಂಡ ಮಚ್ಚರದ ಮೆ
ವಣೆಗೆಯಂಕಕಾಱರೆಕ್ಕತುಳಕ್ಕೆಕ್ಕೆಯಿಂ ಸೂೞ್ಏಱುಱುವಂತೊರ್ವರೊ
ರೊಳ್ ಕಾದೆ—

ಉ || ಸೂತರುರುಳ್ಪಿನಂ ರಥ ತುರಂಗಮ ರಾಜಿ ಸುರುಳ್ಪಿನಂ ಚೞ |
ತ್ಕೇತುಗಳೆತ್ತಮಪ್ಪೞಿಸಿ ಬೀೞ್ಪಿನಮುಳ್ಕುಱ[3] ಕಾದಿ ಬಾಣ ಸಂ
ಘಾತದ ಕೋೞೊಳುಚ್ಚೞಿಪ ನೆತ್ತರೊೞಿಚ್ಚೆಯಿ [4][ಕೆ]ಟ್ಟೊಡಾತ
ತ್ರೀತನುಮಿತ್ತ ಜೋ[5]ಲ್ದ ರಣಮಂ ಪೊಗೞುತ್ತಿರೆ ದೇವ ಕೊ
ಗಳ್ || ೭೭

ವ|| ಆಗಳ್ ಧರ್ಮರಾಜನುಮಿತ್ತ ರಾಜರಾಜನುಮೊಂದೊರ್ವ
ಕೆಯ್ಕೊಂಡು ತಂತಮ್ಮ ರಥಂಗಳನೇಱಿಸಿಕೊಂಡುಯ್ದರಿತ್ತ ಕರ್ಣ
ಪಾಂಡವಬಳ ಜಳನಿಧಿಯಂ ಬಡಬಾನಳನೞುರ್ವಂತೞುರ್ದು ತನ್ನೊ
ಪೋಗದೆ ಪೆಣೆದ ಪ್ರಭದ್ರಕ ಬಲಮೆಲ್ಲಮಂ ಕೊಂದನನ್ನೆಗಮಿತ್ತ ಭೀ
ಶ್ವತ್ಥಾಮರಿರ್ವರುಂ ಚೇತರಿಸಿ ಸೂತ ಪತಾಕಾ ತುರಂಗಸೋ
ರಥಂಗಳನೇಱಿಕೊಂಡು ಮತ್ತಮೊರ್ವರೊರ್ವರನಱಸುತ್ತುಂ ಸಂಗ್ರಾ

1 ಱುಗಿಯೆ(ಕ.). 2 ಥ (ಕ.). 3 ಳ್ಲ (ಕ.). 4 ಗೆ (ಸ.) 5 ಲ್ಬ (ಕ.)

ಅವಿಯೊಳಗನೆ ಬರೆ ಜರಾಸಂಧನ ಮಗಂ ಕ್ಷೇಮಧೂರ್ತಿ ತಮ್ಮಯ್ಯನಂ ಕೊಂದ ಪಗೆಯಂ ನೆನೆದು ತನ್ನೇಱಿದ ಮತ್ತ ಹಸ್ತಿಯಂ ಭೀಮನಂಗೆ ತೋಱಿಕೊಟ್ಟಾಗಳ್—

ಕಂ || ಬಡಿಗೊಂಡು ಮಸಗಿ ಚೈತ್ರಮ |
ನೊಡೆವ ಮಹಾ ಮಕರದಂತೆ ಕರಿ ಘಟೆಗಳನಾ ||
ರ್ದುಡಿಯೆ ಬಡಿದಾನೆವೆರಸಾ |
ಗಡೆ ಕೊಂದಂ ಕ್ಷೇಮಧೂರ್ತಿಯಂ ಪವನಸುತಂ || ೭೮ ||

ವ || ಅಂತು ಕ್ಷೇಮಧೂರ್ತಿಯಂ ಕ್ಷೇಮದಿಂ ಕೊಂದನನ್ನೆಗಮತ್ತ ರುನ್ನಂದನನನಱಸುತ್ತುಂ ಬರ್ಪಶ್ವತ್ಥಾಮನಂ ಪಾಂಡ್ಯನೆಡೆಗೊಂಡು ದು ಮಾರ್ಕೊಂಡು—

ಕಂ || ನೀನಲ್ಲದೆನ್ನ ಶರ ಸಂ |
ಧಾನಮನಾನಲ್ಕೆ ನೆಱೆವರಿಲ್ಲೀ ಪಡೆಯೊಳ್ ||
ನೀನಿನಿಸನಾಂಪುದೆಂಬುದು |
ಮಾನಲ್ಲದೆ ನಿನ್ನನಾಂಪ ಗಂಡರುಮೊಳರೇ || ೭೯ ||

ಎನೆ ಬೆಳ್ಮಸೆಯಂಬಿನ ಸರಿ |
ಮೊನೆಯಂಬಿನ ಸೋನೆ ಪಾರೆಯಂಬಿನ ತಂದಲ್ ||
ಘನಮಾದುದಲ್ಲಿ ಕಿತ್ತಂ |
ಬಿನ ಬಡಪಮಿದೆನಿಸಿ ಪಾಂಡ್ಯನಂಬಂ ಕಱೆದಂ || ೮೦ ||

ಕಂ || ಕಱೆದೊಡವನಿತುಮನಂತಂ |
ತುಱಿದೆಚ್ಚು ಕಡಂಗಿ ತಱಿದು ಶರ ವರ್ಷದಿನಂ ||
ದಱಿಯೆ ಕಡಿಕೆಯ್ದು ಬಿಡದೆ[1]ಡೆ |
ವಱಿನಂ ಮಾಡಿದುವು ಗುರುತನೂಜನ ಕಣೆಗಳ್ || ೮೧ ||

---

1 ಡ (ಖ. ಗ. ಘ.).

ಎಡೆವಱಿದೊಳೆಱಗಿ ಬಱಿಸಿಡಿ।
ಲಿಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದ
ಚ್ಚುಡಿದಟ್ಟೆ ತಟ್ಟೆಕೊಂಡುವು।
ಕಡುಗೂರಿದುವೆನಿಪ ಗುರುತನೂಜನ ಕಣೆಗಳ್

ವಿರಥಂ ಪಾಂಡ್ಯಂ ಕೋಪ।
ಸ್ಫುರಿತಾಧರನುಡಿದು ಕೆಡೆಯೆ ಪಟಿಯಿಗೆ[1][ಯುಂ]
ಬ್ಬರ ಬಿರಿಯೆ ಗುರು ತನೂಭವ।
ನುರಮಂ ಬಿರಿಯೆಚ್ಚು ಬೆಂಗೆವಂದಂ ಗಜದಾ

ವ॥ ಅಂತು ತನ್ನ ನಚ್ಚುವ ಕೆಯ್ದುಗಳನಿತು ಪೋಳೆಯೆ ಮು
ಮತ್ತ ಹಸ್ತಿಯನಣೆದು ತೋಱಿಕೊಟ್ಟಾಗಳ್—

ಉ॥ ಈ ಮದದಂತಿಯೆಟ್ಟಿರವುಮೀತನ ಶೌರ್ಯಮುಮೀ ಮ

ಗ್ರಾಮದೊಳೆನ್ನುಮಂ ಚಳಿಯಿಸಲ್ ಬಗೆದಪ್ಪುದು
ಪಾಂಡ್ಯ
ನ್ನೀ ಮಹಿಯೊಳ್ ಪೆಱಂ ಕಲಿಯೆ ನೆಟ್ಟನಿದಿರ್ಚುವ ನಿಚ್ಚ
ಟಿಕ್ಕೆ
ಭೀಮನುಮಿನ್ನನಲ್ಲನೆನೆ ಪೋಲ್ವೆ[2][ಗಿ]ವಂಗೆಣೆ ಗಂಡರೆ

ವ॥ ಎಂಬನ್ನೆಗಂ ಪಾಂಡ್ಯನಶ್ವತ್ಥಾಮನ ರಥಮಂ ಮುಟ್ಟಿ

ಕಂ॥ ವಿಳಯಾನಳ ವಿಳಸನ ವಿ।
ಸ್ಫುಳಿಂಗ ಸಂಘಾತದಿಂ ತಗುಳ್ದಡರ್ವನಿತೊಂ॥
ದಳವಿಯ ತೋಮರದಿಂದಿಡೆ।
ಪೊಳೆವಸ್ತ್ರದೆ ಗುರು ತನೂಜನೆಡೆಯೊಳೆ ಕಡಿದಂ

1 ಯಂ (ಸ.). 2 ನಿ (ಸ.).

ವ|| ಅಂತದಂ ಕಡಿದು ಕೂರಿದುವುಂ ನೇರಿದುವುಮಪ್ಪಯ್ದುವೋಘಾ
ಗಳಂ ಬಾಣಧಿಯಿಂದುರ್ಚಿಕೊಂಡು ತನ್ನ ಮನದೊಳೆ ಸಮಕಟ್ಟಿ
ಡೆಚ್ಚಾಗಳ್—

ಕಂ || ಕರಿ ಕರಮುಂ ಮಾವಂತನ |
ಕರ[1]ಮುಂ ತತ್ಪಾಂಡ್ಯ ಶಿರಮುಮೊಡನುರುಳೆ ಭಯಂ ||
ಕರಮುಮನುರ್ವಿಗಗುರ್ವುಮ |
ನೆರಡುಂ ಪಡೆಗಳ್ಗೆ ತೋಱಿದಂ ಗುರು ತನಯಂ || ೮೬ ||

ವ|| ಅನ್ನೆಗಂ ಸಂಸಪ್ತಕ ನಿಕಾಯಮನತಿ ನಿಶಿತ ಸಾಯಕ
ಯದಿಂ ನಿಶ್ಶೇಷಮಾಗೆ ಮಾಡ್ಪಿ ಸಾಮಂತ ಚೂಡಾಮಣಿ ಕೌರವ
ನ ಕಳಕಳಮಂ ಕೇಳ್ದು ಮನಃಪವನ ವೇಗದಿಂ ಜವನೆ ಬರ್ಪಂತೆ
ಸಿ ತಾಗಿದಾಗಳಕ್ಷೋಹಿಣೀ ನಾಯಕಂ ದಂಡಧಾರಂ ಗಂಡಗುಣಕ್ಕಾ
ಮಾಗಿ ಮದ ಗಳಿತ ಗಂಡ ಪ್ರಚಂಡಮದವೇತಂಡಮನಣೆದು
ಕ್ಕಿದಾಗಳ್*—

ಕಾದಲಿದಿರ್ಚಿ ಬಂದ ಪಗೆ ಸಂಪಗೆಯಂತೆ ಶಿಳೀಮುಖಕ್ಕೆ ಗೆಂ|
ಟಾದುದಿದೊಂದೆ ಸಿಂಧುರದೊಳಿಂತಿವನೊರ್ವನೆ ತಳ್ತನಾದೊಡೇ ||

---

1 ಮುನ್ನಂತ (ಕ.).

* ಈ ವಚನವಾದ ಮೇಲೆ, ಇಲ್ಲಿ ಕೊಟ್ಟಿರುವ ಎರಡು ಪದ್ಯಗಳು ಘ. ಪ್ರತಿ
ಮಾತ್ರ ಇವೆ—

ಕಂ|| ಎಂದಾನುಮಿಂದರಂ ಗುರು | ನಂದನನಾಟಂದು ಕೊಂದನಂಧಕ ತನಯ||
ಸ್ಯಂದನಮಾ ಪ್ರತಿವಿಂಧ್ಯನ|ನೊಂದುಂ ತಳುವಿಲ್ಲದಿಕ್ಕಿ ಗೆಲ್ಲಂಗೊಂಡಂ||
ಕೃಪನೊಳ್ ಪೊಣರ್ದಳ್ಕಿ ಗತ | ಕೃಪನಾಗೆ ಶಿಖಂಡಿ ಬಳಿಕ ಧೃಷ್ಟದ್ಯುಮ್ನಂ ||
ಗೆ ಪರಾಙ್ಮುಖನಾಗೆ ಕೃಪಂ| ಕೃಪನಂ ಪಿಂತಿಕ್ಕಿ ಕೌರವಂ ನೆರೆದಾಗಳ್ ||

